ಜಯಕರ್ನಾಟಕ ಗ್ರಂಥಮಾಲೆಯ ಹೆತ್ತ್ಕೈಯ ಪುಷ್ಪ

# ಪೂರ್ವರಂಗ

( ಒಂದು ಆಧ್ಯಾತ್ಮಿಕ ಕಥೆ )

"ಅಧ್ಯಾತ್ಮವೆ ನಿಚಿತಪ್ರಯೋಜನವೆನಗೆ-"

—ಭರತೇಶ ವೈಭವ.

ಮಧುರಚೆನ್ನ

ಬೆಲೆ ಹತ್ತು ಆಣೆ.

೧೯೩೨

# ಮುನ್ನುಡಿ

ಅರವಿಂದಸ್ಮೇರವಾಸ್ಯಂ ತಿಳಿಪೆ ಹೃದಯಸಂಶುದ್ಧಿಯಂ ಮಾನಸಂ ಶಾಂ– ।
ತರಸಾಧೀನಂ ಸಮಾಧಾನಮನರಿಪೆ ತಪಸ್ತಪ್ತಮುತ್ತಪ್ತಕಾರ್ತ ॥
ಸ್ವರಶಾಖಾಲೀಲೆಯಂ ಪಾಳಿಸೆ ತನು ನಯನಂ ಕಾಳ್ಪುರಂಮಾಡೆ ಕಾರು– ।
ಣ್ಯರಸಸ್ರೋತಂಗಳಿಂ ಲೋಕಮನೆರಗಿಸಿದಂ.............॥

—ನಾಗಚಂದ್ರ

ಗೆ। ಚೆನ್ನಮಲ್ಲಪ್ಪ ಗಲಗಲಿ (ಹಲಸಂಗಿ) ಇವರು ಈ ಪುಸ್ತಕದಲ್ಲಿ ತಮ್ಮ ಸಾಧನದ ಇತಿವೃತ್ತವನ್ನ ಅಧ್ಯಾತ್ಮಿಕಕಥೆಯಾಗಿ ಬರೆದಿದ್ದಾರೆ; ತಮ್ಮ ಅಂತರಂಗವನ್ನು ಬಹಿರಂಗಪಡಿಸಿದ್ದಾರೆ. ಸಾಹಿತ್ಯದಲ್ಲಿ ಅವರು ಒಂದುಬಗೆಯ ವಾಸ್ತವವಾದಿಗಳು. ಸ್ವಾನುಭವವನ್ನು ಸ್ವಭಾವೋಕ್ತವಾಗಿ ಹೇಳುವದು ಅವರ ಮಾರ್ಗ. ಕೊಂಕು ಅವರಿಗೆ ಸರಿಬರದು. ಈ ಮೊದಲು ಅವರು ಬರೆದ 'ಮಧುರ ಗೀತ' ಮತ್ತು 'ನನ್ನ ನಲ್ಲ' ಎಂಬೆರಡು ಕವನಗಳಿಗೆ ಇದು ತಕ್ಕ ಮುನ್ನುಡಿಯಾಗಿದೆ. ಗೆ। ಚೆನ್ನಮಲ್ಲಪ್ಪನವರು ಒಂದರಲ್ಲಿ 'ಮಧುರಚೆನ್ನ'ರಾದರು 'ನನ್ನ ನಲ್ಲ'ದಲ್ಲಿ ಅವರು ವಧುವಿನ ವಚನಸರಣಿಯನ್ನು ಸ್ವೀಕರಿಸಿದರು. ಈ ಪುಸ್ತಕದಲ್ಲಿ ಅವರು 'ಜ್ಞಾನಭಿಕ್ಷು'ಗಳಾಗಿದ್ದಾರೆ. ಇವೆಲ್ಲವುಗಳಲ್ಲಿಯೂ ವಸ್ತುವು ಆತ್ಮೀಯ ಇತಿವೃತ್ತ; ರೀತಿ ಸಾಹಿತಿಯದು. ಅವರ ಯತ್ನ ಮತ್ತು ಫಲಪ್ರಾಪ್ತಿಗಳ ಮಧ್ಯದಲ್ಲಿ ಸಂಚಾರಿಭಾವಗಳ ಕಡಲು ಆಲ್ಲೋಲ ಕಲ್ಲೋಲವಾಗಿ ಏಳು ಬೀಳುತ್ತಿದ್ದರೂ ಅವರ ಅಪ್ರತಿಹತವಾದ ಉತ್ಸಾಹವು ಶಾಂತಿಯನ್ನು ಪಡೆದೇ ಶಾಂತವಾಗಿರುವದು. ಮುಮುಕ್ಷುಗಳಿಗೂ, ಸಾಧಕರಿಗೂ ಜ್ಞಾನಭಿಕ್ಷುವಿನ ಸಾಕ್ಷಿಯಲ್ಲಿ ಆಶೆಯ ಸಂದೇಶವಿದೆ. ಈಸಿ ಜಯಿಸಬಹುದು ಎಂದರೆ ನೀರು ಹೊಕ್ಕವರಿಗೆ ಎಷ್ಟೋ ಧೈರ್ಯ.

ಶಾಂತಿಯು ಬರವು ಸಾಪಿನ ಬರವಿನಂತೆ ಆಗವು. ಇಷ್ಟು ದಿವಸಕ್ಕಿಷ್ಟಾದರೆ ಅಷ್ಟು ದಿವಸಕ್ಕೆಷ್ಟು? ಎಂಬ ತ್ರೈರಾಶಿಕದ ತೆಕ್ಕೆಗೆ ಅದು ಸಿಕ್ಕದು. ಬುದ್ಧನಿಗೆ ಹೆಣವನ್ನು ನೋಡಿ ವೈರಾಗ್ಯವುಂಟಾಯಿತು; ರಾಮದಾಸರು 'ಸುಮುಹೂರ್ತೇ ಸಾವಧಾನ' ಎಂಬ ಮಾತು ಕೇಳಿ ಸಾವಧಾನರಾದರು; ನನಗೂ ಏನಾದರೂ ಹಾಗೆಯೇ ಆದೀತು—ಆಗಬೇಕು—ಎಂಬ ಅನುಮಾನವು ಸಾಧನದಲ್ಲಿ ಕೇವಲ ಅನುಮಾನವೇ ಹೊರತು ಬಂದಿಷ್ಟು ಪ್ರಮಾಣವಲ್ಲ. 'ಅಂಥ ಬೇನೆಗೇ ಅವನು ಸಾಯಲಿಲ್ಲ—ಇಂಥ ಬೇನೆಗೆ ಸಾಯುವನೇ?' ಎಂಬ ತರ್ಕಕ್ಕೆ ಬೆದರದೆ, ಬರುವ ಸಾವು ಬಂದುಬಿಡುವಂತೆ ಎಂತೆಂತಹ ಸಾಧನಗಳಿಂದಲೂ ದೊರಕದ ಶಾಂತಿಯು ನಿಮಿತ್ತಮಾತ್ರ ಸಾಧನೆಗೆ ಒಮ್ಮೊಮ್ಮೆ ಅನಾಯಾಸವಾಗಿ ಉಂಟಾಗುವದು. ನಮ್ಮ ಸಾಮಾನ್ಯ ವ್ಯವಹಾರದಲ್ಲಿಯೇ ಎಷ್ಟೋ ಮಾತು ತಲೆಗೆ ತೂಗದೆ ಹೋಗುವಾಗ, ಶಾಂತಿಯು ನೆಲೆಯು ಸಾಮಾನ್ಯಕೋಷ್ಟಕದ ಆಳತೆಗೆ ಸಿಕ್ಕದಿರುವದು ಆಶ್ಚರ್ಯವಲ್ಲ.

ಈ ಮಾತನ್ನು ಪೂರ್ವಿಕರು ತಮ್ಮ ಆಧ್ಯಾತ್ಮವಿದ್ಯೆಯ ಶಾಸ್ತ್ರಗಳಲ್ಲಿ ವಿಧವಿಧವಾಗಿ ಸೂಚಿಸಿದ್ದಾರೆ. ಒಬ್ಬರು ಪ್ರಾರಬ್ಧದ ತೊಡಕಿನಲ್ಲಿ ಅದನ್ನು ತೊಡಕಿಸಿದರೆ, ಇನ್ನೊಬ್ಬರು ಅದನ್ನು ಈಶ್ವರೇಚ್ಛೆಯ ಗೂಟಕ್ಕೆ ತೂಗಹಾಕುವರು. ಒಬ್ಬರು 'ಹೃಷಿಕೇಶ' ಎನ್ನುವರು ಮತ್ತೊಬ್ಬರು 'ಕಾಲತತ್ತ್ವ' ಎನ್ನುವರು. ಕರ್ಮ, ಮಾಯೆ, ಲೀಲೆ ಈ ಮೊದಲಾದ ಶಬ್ದಗಳು ಗೊತ್ತಿಲ್ಲದುದಕ್ಕೆ ಗೊತ್ತಿದ್ದಹಾಗೆ ಇಟ್ಟ ಹೆಸರುಗಳು. ಇವುಗಳ ಗುಟ್ಟನ್ನು ತಿಳಿದುಕೊಳ್ಳುವ ಶಕ್ತಿಯು ತನ್ನಲ್ಲಿಲ್ಲವೆಂದು ಮಾನವನು ಒಪ್ಪಿಕೊಂಡಿದ್ದಾನೆ. ಅದಕ್ಕೆ ಅತಿಮಾನವಶಕ್ತಿಯು ಬೇಕು. 'ನಿರ್ವಿಕಲ್ಪಸತ್ಯವು ನನಗೆ ದೊರಕಿರದಿದ್ದರೂ ಅದನ್ನು ಪಡೆಯುವ ಮಾರ್ಗವು ನನಗೆ ದೊರಕಿದೆ' ಎಂದು ಮಹಾತ್ಮ ಮೋಹನದಾಸರು ಹೇಳುವಂತೆ, 'ವಿವಿಧಜೀವಗಳೊಳ

ಗಿನ ಶಾಂತಿಪರಿಪಾಕದ ಕಾಲಗತಿಯ ನಿಯಮವು ತಿಳಿದಿರದಿದ್ದರೂ ಅದರ ವಿವಿಧಸಂಥಗಳನ್ನು ಅನೇಕಾನೇಕರು ಸಿದ್ಧರು ಗೊತ್ತು ಪಡಿಸಿದ್ದಾರೆ.' ಎಂದು ಹೇಳಬಹುದು.

ಆದರೆ 'ಶಾಂತಿ' ಎಂಬುದು ಒಂದು ಮಾತು; ಅದರ ಪರಿಗಳೊ ಅನೇಕಾನೇಕ. ತಿಳಿಯದ ಮೂಢನ ಶಾಂತಿಯೊಂದು, ನಾ-ಚಿ-ಕೆ ಎಂಬ ಮೂರಕ್ಷರಗಳನ್ನು ಬಿಟ್ಟವನದಿನ್ನೊಂದು, ಬೂದಿ ಬಡಕೊಂಡ ಬೈರಾಗಿಯದು ಮತ್ತೊಂದು. 'ಬಂದದ್ದೆಲ್ಲಾ ಸಾ ಬರಲಿ' ಎಂದು ಹಾಡುವವನ ನೆಲೆ ಬೇರೆ, 'ನೀನಲ್ಲದೆನಗಿಲ್ಲ' ಎನ್ನುವವರ ಮೆಟ್ಟು ಬೇರೆ 'ತನು ನಿನ್ನದು ಜೀವನ ನಿನ್ನದು' ಎನ್ನುವವರ ಪದವಿ ಬೇರೆ. ಷಟ್ಸ್ಥಲಮಾರ್ಗದಲ್ಲಿಯೆ, ನಿವೃತ್ತಿಯನ್ನು ಮೊದಲು ಮಾಡಿಕೊಂಡು ಶಾಂತ್ಯಾತೀತೋತ್ತರೇ ಎಂಬ ಕಲೆಯ ವರಗಿನ ಆರು ನೆಲೆಯ ಶಾಂತಿ ಯನ್ನು ಗುರುತಿಸಿದ್ದಾರೆ. ಉದಾಸೀನನ ಶಾಂತಿ, ಮೌನಿಯ ಶಾಂತಿ, ಸಾಕ್ಷಿಯಾಗಿರುವವನ ಶಾಂತಿ, ಎಂದು ಮೂರೂ ಶಾಂತಿಗಳೇ ಆದರೂ ಅವುಗಳ ಆಳ ಬೇರೆ; ಅಂತಸ್ತು ಬೇರೆ. 'ಮನಸಿಚ ಪರಿತುಷ್ಟೇ....' ಎಂಬುದು ಹಾಲಿಲ್ಲದಲ್ಲಿ ಮಜ್ಜಿಗೆಯ ಶಾಂತಿ. 'ಕರ್ಮಣ್ಯೇವಾಧಿ ಕಾರೋಮೇ........' ಎಂಬುದು ಶಾಂತಿಯಲ್ಲ-ಶಾಂತಿಯ ಹಾದಿ. ಶಾಂತಿಗಾಗಿ ಮನದ ಗವಿಯನ್ನು ಹೊಗುವದುಂಟು, ವನದ ಗವಿ ಯಲ್ಲಿ ಹೊಕ್ಕವರುಂಟು. ಆಟನೋಟದ ಶಾಂತಿ, ನಿದ್ದೆಯ ಶಾಂತಿ, ಕುಡುಕರ ಶಾಂತಿ ಇವೂ ಶಾಂತಿಯ ಸಂತೆಯೊಳಗಿನ ಒಡವೆಗಳೇ. ಭ್ರಾಂತವೇದಾಂತಿಗಳ ಬಾಯಿಬ್ರಹ್ಮದ ಶಾಂತಿ, ಪ್ರಕಾಂಡಕರ್ಮ ಠರ ನಿಯಮಧರ್ಮದ ಶಾಂತಿ, ಹುಚ್ಚುಭಕ್ತರ ಹುಡುಗಶಾಂತಿ ಇವೂ ಶಾಂತಿಗಳೇ. ಪ್ರಕೃತಿಯಲ್ಲಿಯೂ ಶಾಂತಿಯ ವಿವಿಧ ವೇಷ ಗಳು ಕಂಡುಬರುವವು. ಬೆಳಗಿನ ತುಂಬಿದ ಶಾಂತಿ, ಮಧ್ಯಾಹ್ನದ ಉಗ್ರಶಾಂತಿ, ಸಂಜೆಯ ಸೌಮ್ಯಶಾಂತಿ, ನಟ್ಟಿರುಳಿನ ಗಹನಶಾಂತಿ, ಬೇಸಗೆಯ ರುಕ್ಷಶಾಂತಿ, ಸುಗ್ಗಿಯ ಮಧುರಶಾಂತಿ, ಮಳೆಯ

ಜಡಶಾಂತಿ, ಬೆಳೆಯ ರಮ್ಯಶಾಂತಿ, ಚಳಿಯ ತೀವ್ರಶಾಂತಿ. ಮಾಗಿಯ ತಿಕ್ಷ್ಣಶಾಂತಿ, ಬೆಟ್ಟಸಾಲಿನ ಭವ್ಯಶಾಂತಿ, ಮುಗಿಲಿನ ದಿವ್ಯಶಾಂತಿ, ಕಡಲಿನ ಗಂಭೀರಶಾಂತಿ, ಸುಡುಗಾಡಿನ ಹಾಳು ಶಾಂತಿ........ ಒಂದೇ ಎರಡೇ! ಜೀವನ್ಮುಕ್ತರ ಚರಿತ್ರಗಳಲ್ಲಿ ವಿಧ ವಿಧದ ಶಾಂತಿಗಳನ್ನು ಕಾಣಬಹುದು. ನಿಜವಾಗಿಯೂ ಶಾಂತಿಯೆಂಬುದು ಅನಂತಗುಣವಾದ ಸದ್ರೂಪದ ನಿಲುಕಡೆಯು. ಅದು ಜಾತಿಯ ಹೆಸರು; ನಾವು ಅದರ ಗುಣಗುಣಗಳಿಗೂ ಶಾಂತಿಯೆಂದು ಕರೆಯುವೆವು. ಅದರ ಛಾಯೆ ಆಭಾಸಗಳಿಗೂ ಅದೇ ಹೆಸರು. ಆದ ಕಾರಣವೇ ಕೆಲವರು ಸತ್ತಮೇಲೆಯೆ ಶಾಂತಿಯೆನ್ನುವರು, ಕೆಲವರು ಶಾಂತಿಗಾಗಿ ಸಾಯಲೆಣಿಸುವರು!

ಹೀಗಿದ್ದೂ ಶಾಂತಿಯು ಒರೆಗಲ್ಲಿಲ್ಲದೆ ಇಲ್ಲ. ಜ್ಞಾನಮಾರ್ಗದಲ್ಲಿ ಸಂಶಯವು ಸಂಕಟವನ್ನುಂಟುಮಾಡುವದು. ಭಕ್ತಿಮಾರ್ಗದಲ್ಲಿ ಸಂಚಾರಿಭಾವಗಳು ಹುಚ್ಚುಹಿಡಿಸುವವು. ಕರ್ಮಮಾರ್ಗದಲ್ಲಿ ಫಲಾಶೆಯು ಹಾದಿಗೆಡಿಸುವದು. ಬೆಳಕಿನ ಕಿರಣವು ಸಂಶಯವನ್ನು ಹರಿಯುವದು; ಆನಂದದ ಲಹರಿಯು ಭಾವದ ಹುಚ್ಚುಬಿಡಿಸುವದು; ಪರಿಪೂರ್ಣನ ಕುರುಹು ಫಲಾಶೆಯನ್ನು ಹಿಂಗಿಸುವದು. ಮೇಲೆ ಬೆಳಕು ಬೇಕು, ಒಳಗೆ ಹಿಗ್ಗು ಬೇಕು, ಹೊರಗೆ ಕುರುಹು ಬೇಕು. ಕುರುಹು ಜನಕ್ಕೆ ಸಾಕ್ಷಿ, ಇತಿಹಾಸಕ್ಕೆ ವಸ್ತು; ಹಿಗ್ಗು ಜೀವದ ಅನ್ನ, ಭಾವದ ಭಾಗ್ಯ; ಬೆಳಕು ದೇವನ ಕರುಣೆ, ವಿಶ್ವದ ಕರುಳು. ಈ ತ್ರಿವೇಣೀಸಂಗಮದಲ್ಲಿ ಮುಳುಗಿದ್ದೆ ಶಾಂತಿ, ಈಸಿದ್ದೆ ಆನಂದ.

ಶಾಂತಿಯಿಲ್ಲದ ಆನಂದವು ಹುಡುಗಾಟ; ಆನಂದವಿಲ್ಲದ ಶಾಂತಿಯು ಹುಚ್ಚು. ವೈಷಮ್ಯವನ್ನು ಕಂಡು ಕಣ್ಣುಮುಚ್ಚುವ, ಬೆದರುವ, ಹಿಂಜರಿಯುವ, ದಂಗುಬಡಿಯುವ ಶಾಂತಿಯು ನೆಲೆದೊರೆಯದ ಅಂತರ ಪಿಶಾಚಿಯು. ಸಮತೆಯ ಸೂತ್ರವನ್ನು ಹಿಡಿದವರು ಶಾಂತಿಯನ್ನು ಸುಸೂತ್ರವಾಗಿ ಮುಟ್ಟುವರು. ಮನದ ಸೀಮೆ

ಯನ್ನು ಗೆಲ್ಲದೆ ಆನಂದವಿಲ್ಲ. ಆನಂದವಿಲ್ಲದ ಶಾಂತಿಯು ಅರಕಳೆ. ಶಾಂತಿಯ ಸ್ವರಾಜ್ಯವು ಆನಂದದ ಸಾಮ್ರಾಜ್ಯವಿಲ್ಲದೆ ಬಾಳಲಾರದು. ಶಾಂತಿ ಆನಂದಗಳು ನಮ್ಮ ಧ್ರುವಬಿಂದುಗಳು. ಅವುಗಳ ಮಧ್ಯ ದಲ್ಲಿ ನಮ್ಮ ಲೋಕವಿದೆ. ಶಾಂತಿಯು ಅಂತಃಪುರದ ಅರಸಿ, ಆನಂದವು ವಿಶ್ವರಂಗದ ಅರಸು. ಮೊದಲಿನದಿಲ್ಲದಿದ್ದರೆ ಬಾಳುವೆಯೇ ಇಲ್ಲ; ಎರ ಡನೆಯದಿಲ್ಲದಿದ್ದರೆ ಬಾಳುವೆಯೇ ಅಲ್ಲ. ಶಾಂತಿಯು ಬದುಕಿನ ನನೆ; ಆನಂದವು ಅದರ ಗೊನೆ.

ವೈಷಮ್ಯಖಂಡದಲ್ಲಿ ಪ್ರಕಟವಾದ ವಿಚಾರಗಳು ಜ್ಞಾನ ಭಿಕ್ಷುವಿನ ರಾಜಸಬುದ್ಧಿಗೆ ತಕ್ಕಂತೆಯೆ ವಿಷಮವಾಗಿವೆ. ಆ ಕಾಲಕ್ಕೆ ಹೇಗೆ ಹೇಗೆ ಭಾವಗಳು ಎಂತೆಂತು ಉದಯವಾದವೋ ಹಾಗೆ ಹಾಗೆ ಅವುಗಳನ್ನು ವ್ಯಕ್ತಮಾಡಲಾಗಿದೆ. ಸಮನ್ವಯಖಂಡ ದಲ್ಲಿ ಈ ವಿಷಮ ವಿಚಾರಗಳ ಸಮನ್ವಯವಿಲ್ಲ; ಆದರೆ ಜ್ಞಾನಭಿಕ್ಷು ವಿನ ಮನದ ವೈಷಮ್ಯವು ಶಾಂತಿಯ ಸಮತೆಯಲ್ಲಿ ಹೇಗೆ ಬಾಯಿ ಗೂಡಿತು—ಎಂಬುದನ್ನಷ್ಟೇ ಹೇಳಲಾಗಿದೆ. ಬೇರೆ ಬೇರೆ ಗ್ರಂಥಗಳೊಳ ಗಿನ ವಿಚಾರಗಳು, ಜನರ ಮಾತುಗಳು, ಜ್ಞಾನಭಿಕ್ಷುವಿಗೆ ಸಂಶಯ ವನ್ನೂ ವೈಷಮ್ಯವನ್ನೂ, ಅತೃಪ್ತಿಯನ್ನೂ ಹೇಗೆ ಹುಟ್ಟಿಸಿದುವು— ಎಂಬ ವಾಸ್ತವಪ್ರಸಂಗ ಕಥನವು ವೈಷಮ್ಯಖಂಡದಲ್ಲಿದೆ. ಸಾತ್ತ್ವಿಕ ಬುದ್ಧಿಯ ದರ್ಶನವು ಸಮನ್ವಯಖಂಡದಲ್ಲಿದೆ.

**ಓಂ ಶಾಂತಿಃ ಶಾಂತಿಃ ಶಾಂತಿಃ ಓಂ**

**ಓಂ ಆನಂದ ಆನಂದ ಆನಂದಃ ಓಂ**

**ದ. ರಾ. ಬೇಂದ್ರೆ**



# ಅರಿಕೆ



ಈ ಕಥೆಯನ್ನು ಬರೆಯಲಿಕ್ಕೆ ನನಗೆ ಎರಡು ಕಾರಣಗಳುಂಟು. ಕನ್ನಡನುಡಿಯಲ್ಲಿ ಈ ಬಗೆಯ ಪುಸ್ತಕಗಳು ಇನ್ನೂ ಹುಟ್ಟಿಲ್ಲ ವೆಂಬದು ಮೊದಲನೆಯದು. ಈ ವಿಷಯದ ವ್ಯಾಸಂಗದ ಸಲು ವಾಗಿ ನನ್ನ ಗೆಳೆಯರನೇಕರು ನನಗೆ ಈ ವರೆಗೆ ಅತಿಶಯವಾಗಿ ಅರ್ಥಿಕಸಹಾಯವನ್ನು ಮಾಡಿದ್ದರಿಂದ ಅವರ ಆ ಹಣದ ಸಾರ್ಥ ಕತೆಯು ಇಷ್ಟರ ಮಟ್ಟಿಗಾದರೂ ಆಗಲೆಂಬದು ಎರಡನೆಯದು.

ಮತ್ತೊಂದು ಮಾತೇನೆಂದರೆ—ಎರಡು ಮೂರು ವರುಷಗಳಿಂ ದಲೂ ನನಗೆ-ಅನಾರೋಗ್ಯದ ಮೂಲಕ ಅಶಕ್ತತೆಯು ಹೆಚ್ಚುತ್ತ ಬಂದು ನನ್ನ ಮೆದುಳೆಲ್ಲಾ ಸಡಿಲಾಗಿ ಹೋಗಿರುವ ಈ ಕಾಲದಲ್ಲಿ, ಈ ಕಥೆಯನ್ನು ಅತ್ಯವಸರದಿಂದ ಕರ್ತವ್ಯಕ್ಕೆಂದು ಬರೆಯಲನುವಾದೆ ನಾದ್ದರಿಂದ ಇದರಲ್ಲಿ ಭಾಷೆಯ ಔಚಿತ್ಯದ ವಿಷಯದಲ್ಲಿ ಎಷ್ಟೊ ಜಾಗ ರೂಕತೆಯನ್ನು ತೆಗೆದುಕೊಳ್ಳಲಿಕ್ಕೆ ನನಗೆ ಸಾಧ್ಯವಾಗಲಿಲ್ಲ.

ವಾಚಕರು ನನ್ನ ನ್ಯೂನತೆಯನ್ನು ಮನ್ನಿಸುವರೆಂದು ಹಾರೈ ಸುವೆ.

**ಮಧುರಚೆನ್ನ**



# ಪ್ರಕಾಶಕರ ಎರಡು ಮಾತು.

ಈ ಪುಸ್ತಕದ ಶಾಸ್ತ್ರೀಯಸ್ವರೂಪವನ್ನು ಕುರಿತು ಮುನ್ನುಡಿಕಾರರು ವಿಶದವಾಗಿ ಬರೆದೇ ಇದ್ದಾರೆ. ಆದರೆ ಬರಿ ವಾಙ್ಮಯಿಕ ದೃಷ್ಟಿಯಿಂದ ನೋಡಿದರೂ, ಇದು ಸಾಹಿತ್ಯದ ಒಂದು ಪ್ರಕಾರ (form) ವಾಗಿಯೂ ಇದೆಯೆಂದು ಹೇಳಲಡ್ಡಿಯಿಲ್ಲ. ಪ್ರಸಿದ್ಧ ಫ್ರೆಂಚ್ ವಿಚಾರಿಗಳಾದ ರೋಮೆ ರೊಲಾ ಅವರ 'ಜೀನ್ ಕ್ರಿಸ್ಟೋಫೆ' ಎಂಬ ಗ್ರಂಥದ ನಾಯಕನು, ಲೇಖಕರ ಸ್ವಕೀಯ ಜೀವನದಲ್ಲಿನ ಹಲವು ಅನುಭವಗಳನ್ನೂ, ಜಗತ್ತಿನ ಬೇರೆ ಬೇರೆ ಸಮಸ್ಯೆಗಳನ್ನು ಕುರಿತು ಅವರ ಮನೋರಂಗದಲ್ಲಿದ್ದ ಉತ್ತರಗಳನ್ನೂ ಪ್ರತಿಬಿಂಬಿಸುತ್ತಾನೆ. ಪ್ರಸ್ತುತಗ್ರಂಥದ ಲೇಖಕರು, 'ಜ್ಞಾನಭಿಕ್ಷುವು' ಈಶಪ್ರಾಪ್ತಿಯ ಸೋಪಾನವನ್ನೇರುವಾಗ ಆಯಾಕಾಲದಲ್ಲಿ ಯಾವ ಯಾವ ಮನಃಸ್ಥಿತಿಗಳಲ್ಲಿ ಹಜ್ಜೆಯಿಟ್ಟನೋ ಅವುಗಳನ್ನೆಲ್ಲ ವರ್ಣಿಸುವಾಗ, ವಾಚಕರು ಅವುಗಳೊಡನೆ ತಾದಾತ್ಮ್ಯವನ್ನು ಪಡೆಯದೆ ಇರರೆಂದು ನಮ್ಮ ಭಾವನೆ. ಒಳ್ಳೆಯ ಸಾಹಿತ್ಯದ ಲಕ್ಷಣವು ಇದು ಅಲ್ಲದಿದ್ದರೆ, ಇನ್ನಾವುದಿದೆ?

'ನಾಮಾವಳಿ'ಯಂತೆ, ಪ್ರಕಾಶನವು ತಡವಾದುದಕ್ಕಾಗಿ ಮತ್ತೆ ಕ್ಷಮಾಪಣೆಯನ್ನು ಕೋರಬೇಕಾಗಿದೆ. ನಮ್ಮ ಸಣ್ಣ—ಬಡ—ಮುದ್ರಣಾಲಯದಲ್ಲಿ ನಮ್ಮ ಎಲ್ಲ ಕೆಲಸವನ್ನೂ ಜರುಗಿಸಬೇಕಾಗಿದೆಯೆಂಬುದನ್ನು ಸಹೃದಯರಾದ ವಾಚಕರು ಅರಿಯದೆ ಇರರೆಂದು ತಿಳಿದಿದ್ದೇವೆ. ಇನ್ನುಳಿದ ಮೂರು ಪುಸ್ತಕಗಳನ್ನು ಕ್ರಮಶಃ ಕೊಡಲಿರುವೆವು.

# ಪರಿವಿಡಿ

## ವೈಷಮ್ಯಖಂಡ



## ಸಮನ್ವಯಖಂಡ





# ಬ್ರಹ್ಮಾರ್ಪಣಂ



## ದೇವತಾ

## ದ್ಯಾವಾಪೃಥಿವಿಗೆ

"—ಮಾತಾ ಪೃಥಿವೀ—ಪಿತಾ ದ್ಯೌಃ"

ಋ. ೧-೮೯-೪

"—ಯಸ್ಯ ಪೃಥಿವೀ ಶರೀರಂ"

—ಬೃಹದಾರಣ್ಯಕ ೩-೭-೩

—Whose body is Earth

—A. E.

# ಪೂರ್ವರಂಗ



## ೧

## ವೈಷಮ್ಯಖಂಡ

ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾ·· ।
ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥
ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ॥

" ಬಿಡಿಯನ್ನು ಬಿಡಿಬಿಡಿಯಾಗಿ ಕಾಣುವುದು ರಾಜಸಜ್ಞಾನ.
ಅವರವರ ಪ್ರಕೃತಿಯಂತೆ ಅವರವರ ಶ್ರದ್ಧೆಯಿರುತ್ತದೆ."

—ಗೀತೆ

# ಪೂರ್ವರಂಗ

## ೧. ಗುರೂಪದೇಶ.

ಪ್ರತಿಯೊಬ್ಬ ಮನುಷ್ಯನ ಗುಣವೃತ್ತಿಗಳಿಗೆ ಸಹವಾಸವೂ ಪರಿಸ್ಥಿತಿಯೂ ಕಾರಣವಾಗಿರುವಷ್ಟೇ ವಂಶಾನುಗತಿಯೂ ಒಂದು ಮಹತ್ತರವಾದ ಕಾರಣವಾಗಿರುತ್ತದೆ. ನಮ್ಮ ಕಥಾನಾಯಕನಾದ ಜ್ಞಾನಭಿಕ್ಷುವಿನ ವಂಶಾನುಕ್ರಮದ ಗಂಡುವಳಿಯಲ್ಲಿ ಧಾರ್ಮಿಕತನವೂ ದೊಡ್ಡಸ್ತನವೂ ಹರಿಗಡಿಯದೆ ಬಂದರೆ, ಹೆಣ್ಣುವಳಿಯಲ್ಲಿ ಉಗ್ರಸಂಶಯವೃತ್ತಿಯೂ ಇಂದ್ರಿಯಾಧೀನತೆಯೂ ಅತಿಶಯವಾಗಿ ಬೆಳೆದು ಬಂದಿದ್ದವು. ಗಂಡುವಳಿಯ ಶ್ರದ್ಧೆ, ಹೆಣ್ಣುವಳಿಯ ಅನಿಗ್ರಹವೃತ್ತಿ ಇವೆರಡೂ ಈತನಲ್ಲಿ ಬೀಜರೂಪವಾಗಿ ಬೇರೂರಿ ಕೊಂಡಿರುವದರಿಂದಲೇ ಕ್ಷುಲ್ಲಕತರವಾದ ಬಾಲ್ಯದೊಳಗಿಂದ-ಆಕಸ್ಮಿಕವಾಗಿ ಕೌತುಕಕರವಾದ ಕಿಶೋರಾವಸ್ಥೆಯು ತಲೆದೋರಿತು. ಜ್ಞಾನಭಿಕ್ಷುವಿನ ಆಯುಷ್ಯದಲ್ಲಿ ಹದಿಮೂರನೆಯ ವರುಷವು ಬಹಳವಿಲಕ್ಷಣವಾದದ್ದು. ಕೆಟ್ಟಹುಡುಗರ ಸಹವಾಸದಿಂದ ಕಾಮುಕತನದ ಕೆಟ್ಟಚಾಳಿಗೆ ಬಿದ್ದದ್ದೂ ಅದೇ ವರುಷ; ಮೃತನಾದ ತಂದೆಯು

ಪ್ರೀತಿಯ ಪುಸ್ತಕವೆಂದು ಶಿವಲೀಲಾಮೃತವನ್ನೋದಿ, “ ಜನ್ಮೋದ್ಧಾರ”ಕ್ಕಾಗಿ ಗುರೂಪದೇಶವನ್ನು ಆಶಿಸಿದ್ದು ಅದೇ ವರುಷ. ಆಗ ಈತನಿಗೆ ಜನ್ಮೋದ್ಧಾರವೆಂದರೇನೆಂಬುದೇ ಗೊತ್ತಿಲ್ಲದಿದ್ದರೂ ಆ ಪುಸ್ತಕದಲ್ಲಿ ಗುರೂಪದೇಶವಿಲ್ಲದೆ ಗತಿಯಿಲ್ಲವೆಂದು ಹೇಳಿದ ಕಥೆಯು, ಎಳೆಮನಸ್ಸಿನ ಮೇಲೆ ಅರಿಯದಾತೆ ಅಚ್ಚೊತ್ತಿತ್ತು. ಆಗ ತನ್ನ ಮನೆತನದ ಗುರುವೆನಿಸಿಕೊಳ್ಳುತ್ತಿದ್ದ ಒಬ್ಬ ಮುದುಕ ‘ಪಡದಪ್ಪ’ನ ಹತ್ತರಹೋಗಿ ಮನದಾಶೆಯನ್ನು ತಿಳಿಸಲು, ಅವನು ನಕ್ಕು—‘ತಮ್ಮಾ, ನಿಮ್ಮ ತಂದೆಯೊಬ್ಬನು ‘ಗುರುಬೋಧಕೊಡಿರಿ—ಗುರಬೋಧಕೊಡಿರಿ’ ಎಂದು ಚಲ್ಲವರಿದು ಹೋದನು. ಈಗ ನೀನೊಬ್ಬ ಅದಕ್ಕೆ ಹೊರಟಿ. ನಿಮ್ಮಪ್ಪನಿಗೇ ಕೊಡದ ನಾನು ನಿನಗೆ ಕೊಟ್ಟೇನೆ? ಅದು ಬೆಂಕಿಯ ಪೊಟ್ಟಿ” ಎಂದು ನಿರಾಕರಿಸಿದನು. ಆ ಮೇಲೆ ಇನ್ನೇನು ಮಾತ ಬೇಕೆಂಬುದು ತಿಳಿಯದಂತಾಗಲು, ಈತನು ಮತ್ತೆ ಅದೇ ಪುಸ್ತಕವನ್ನು ತಿರುತಿರುಗಿ ಚಿತ್ತಗೊಟ್ಟು ಓದುತ್ತಿರಲು, ಅದರಲ್ಲಿ ಇನ್ನೊಂದು ಯುಕ್ತಿ ಸಿಕ್ಕಿತು. ಮಾನಸಪೂಜೆಯಿಂದ ಪರಮಾತ್ಮನ ಅನುಗ್ರಹವು ಅತಿಶಯ ಸುಲಭವೆಂದು ಒಂದು ಕಥೆಯಿಂದ ಗೊತ್ತಾಗಿ, ಅದರಲ್ಲಿ ಹೇಳಿದ ಪದ್ಧತಿಯಿಂದ ಹೊಲದೊಳಗೆ ನೀರುಹರಿಯು ದಂಡೆಯ ಮೇಲೆ ಆರಲಿನ ಲಿಂಗವನ್ನು ಮಾಡಿ, ಅಡವಿಯ ಹೂಗಳನ್ನೇರಿಸಿ ಕಣ್ಣು ಮುಚ್ಚಿಕುಳಿತು, ಮನಸ್ಸಿನಲ್ಲೇ ಮಹಾದೇವರನ್ನು ಕಲ್ಪಿಸಿ ಅಕ್ಕರತೆಯಿಂದ ಪೂಜಿಸಹತ್ತಿದನು. ಆಗ ಈ ಕಿಶೋರನಿಗೆ ಅದೇ ಹನ್ನೆರಡು ವರುಷ ತುಂಬಿತ್ತು. ಆಗ ಇವನಿಗೆ ಬೇರೆ ಜಿಜ್ಞಾಸೆಯೆಂಬುದೇನೂ ಗೊತ್ತಿಲ್ಲ. ಬರಿ ಬಾಲಸುಲಭಭಕ್ತಿ. ಮನಸ್ಸಿನಲ್ಲಿ ಮೂಡಿಸಿದ ಆ ಶಿವಪಾರ್ವತಿಯರ ಪಾದಗಳನ್ನು ತೊಳೆಯುವದು, ವಿಭೂತಿ ಮತ್ತು ಹೂಗಳಿಂದ ಪರಿಪರಿಯಾಗಿ ಅಲಂಕರಿಸುವದು, ತಿರುತಿರುಗಿ ಪಾದಗಳ ಮೇಲೆ ಹಣೆಯನ್ನಿರಿಸಿ ಆನಂದಸ್ಪರ್ಶದಿಂದ ಹಿಗ್ಗುವದು, ಹಣ್ಣು

ಹಂಪಲಗಳನ್ನೂ, ಪರಿಪರಿ ಪಕ್ವಾನ್ನಗಳನ್ನೂ ನೈವೇದ್ಯವಾಗಿ ಸಮರ್ಪಿಸಿ ಅವರಿಗೆ ಉಣ್ಣಲೇಬೇಕೆಂದು ಅಲವರಿಯುವದು, ಅವರು ತನಗೂ ಸವಿದುತ್ತುಗಳನ್ನು ಉಣ್ಣಿಸಿದಂತೆ ಭಾವಿಸಿ ಸಂತೋಷಿಸುವದು. ಹೀಗೆ ಎಷ್ಟೋ ದಿನ ಮಾನಸಸಾಮ್ರಾಜ್ಯ ಸಾಗಿತು. ಸಾಮಾನ್ಯವಾಗಿ ಎಷ್ಟೋ ಹುಡುಗರು ದೇವರಪೂಜೆಯ ಆಟವನ್ನಾಡುತ್ತಿರುವಂತಹದು ಇದಲ್ಲ. ಇದರಲ್ಲಿ ಮುಗ್ಧನಿಜಭಕ್ತಿಯಿದೆ.

ಹೀಗೆ ನಡೆದಿರಲು ಆ ಮಾನಸಪೂಜೆಯ ಫಲದಿಂದಲೋ ಏನೋ ಎನ್ನುವಂತೆ "ಗುರುವಿನಹುಚ್ಚು" ಬಿಡುವಂಥದೊಂದು ಸಂಗತಿಯು ತುಸುದಿನಗಳಲ್ಲೇ ಒದಗಿತು. ಒಂದುದಿನ ಊರತುಂಬ ಒಂದು ವಿಲಕ್ಷಣವಾದ ಸುದ್ದಿಹಬ್ಬಿತ್ತು. ಅದೇನೆಂದರೆ—"ಗುರೂಪದೇಶ ಕೊಡುವವರು ಬಂದಿದ್ದು, ಅವರು ಶಿಷ್ಯರಾದವರಿಗೆ ತತ್ಕ್ಷಣದಲ್ಲಿ ದೇವರನ್ನು ತೋರಿಸುತ್ತಾರೆ." ಕೇಳುವದೇನು? ಜ್ಞಾನಭಿಕ್ಷುವಿಗೆ ಇಷ್ಟರಲ್ಲಿ ಹೇಗೋ ಬುದ್ಧಿ ಬೆಳೆದದ್ದರಿಂದ ಇವರ ಉಪದೇಶದ ಚಮತ್ಕಾರವನ್ನು ಪರೀಕ್ಷಿಸೋಣವೆಂದು ಉಪದೇಶಕ್ಕೆ ಉಮೇದವಾರನಾಗಿ ಹೋದನು. ಅಲ್ಲಿ ಬಂದವರು ಕಾವೀಬಟ್ಟೆಯ ಬೈರಾಗಿಗಳಲ್ಲ; ಸಾಧಾರಣನಾಗರಿಕರು. ತುಸು ಇಂಗ್ಲೀಷೂ ಬಲ್ಲವರು. ಅಲ್ಲದೆ ಮಹಾರಾಷ್ಟ್ರದ ಸಾಧುಶಿರೋಮಣಿಗಳಾದ ಶ್ರೀರಾಮದಾಸಸ್ವಾಮಿಗಳ ದಾಸಬೋಧ ಗ್ರಂಥವನ್ನು ಬೆನ್ನಿಗೆ ಕಟ್ಟಿಕೊಂಡು ತಿರುಗಾಡುವವರು. **ಇವರ ಪ್ರವಚನವಲ್ಲಿ ಪರಮಾತ್ಮನಿಗಿಂತ ಗುರುವಿನ ಮಹತ್ವವೇ ಹೆಚ್ಚಾಗಿ ವರ್ಣಿಸಲ್ಪಡುತ್ತಿತ್ತು.** ಜನರು ಹಿಂಡುಹಿಂಡಾಗಿ ಉಪದೇಶಗ್ರಹಣಕ್ಕೆಂದು ನೆರೆದಿದ್ದರು. ಅಲ್ಲಿ ಮುಖ್ಯವಾಗಿ ಎರಡು ಫ್ಯಾಕ್ಟರಿಗಳು ಕಣ್ಣಿಗೆ ಬೀಳುತ್ತಿದ್ದವು. ಒಂದು ಹೊರಗೆ ಪಡಸಾಲೆಯಲ್ಲಿ; ಇನ್ನೊಂದು ಒಳಗೆ ಕೋಣೆಯಲ್ಲಿ. ಹೊರಗೆ ಒಬ್ಬ 'ಮಹಾರಾಜರು' ಚಹಾದ ತಪ್ಪೇಲಿಯನ್ನೂ, ಚಿವಪಾನ

ರಾಶಿಯನ್ನೂ ಇಟ್ಟುಕೊಂಡು ಕುಳಿತು, ಶಿಷ್ಯರಾಗ ಬಂದ ಉಮೇದವಾರರಿಗೆ ಅನುಗ್ರಹಿಸುತ್ತಿದ್ದರು! ಒಳಗೆ ಇನ್ನೊಬ್ಬ ಮಹಾರಾಜರು ನಿಜ ಉಪದೇಶದ ಕೃಪೆಗೆಯ್ಯುತ್ತಿದ್ದರು! ಉಮೇದವಾರರ ಸಂದಣಿಯು ಹೆಚ್ಚಾಗಿ ಇದ್ದುದರಿಂದ ಸರತಿಯ ಮೇಲೆ ಒಬ್ಬೊಬ್ಬರನ್ನು ಒಳಗೆ ಬಿಡುತ್ತಿದ್ದರು. ಹೀಗೆ ಜ್ಞಾನಭಿಕ್ಷುವಿಗೂ, ಪ್ರಥಮಪ್ರಸಾದದ ನಂತರ ಒಳಗಿನ ನಂಬರು ಬಂತು. ಅಲ್ಲಿ ಹೋದನು. ಕೋಣೆಯಲ್ಲಿ ತುಂಬಾ ಕತ್ತಲೆ. ಒಳಗೊಬ್ಬ ಅಂಥಾ ಮಹಾರಾಜರೇ ಚಪಗಾಲು ಹಾಕಿಕೊಂಡು ಕುಳಿತಿರುವದು ಮಸಮಸಕಾಗಿ ಕಾಣಿಸುತ್ತಿತ್ತು. ಶಿಷ್ಯನು ಒಳಗೆ ಹೋದ ಬಳಿಕ ಕೋಣೆಯ ಬಾಗಿಲನ್ನು ಹಾಕಿಕೊಳ್ಳಬೇಕಾಯಿತು. ಆ ಮೇಲೆ ಮಹಾರಾಜರು ಈ ಶಿಷ್ಯನೊಡನೆ ಮಾತನಾಡಹತ್ತಿದರು. ಅವರು ಮೊದಲಿಗೆ ಈತನ ಮನೆವಾರ್ತೆಯನ್ನೆಲ್ಲ ಕೇಳಿಕೊಂಡರು. ಬಳಿಕ – "ನೀನು ದೇವರನ್ನು ನೋಡಬೇಕೆನ್ನುವಿಯಾ?" ಎಂದರು. ಅದಕ್ಕೆ ಈತನು ಹೌದೆನ್ನಲು ಅವರು ಇವನಿಗೆ ಕುಲದೈವದ ಹೆಸರು ಹೇಳೆಂದರು. 'ಶಿವ' ಎಂದು ಹೇಳಿದನು. ಆಗ ಅವರು – "ಚಪಗಾಲು ಹಾಕಿ ಇದಿರಿಗೆ ಕೂಡು, ದೃಷ್ಟಿಯನ್ನು ಮೂಗಿನತುದಿಯ ಮೇಲೆ ಇಡು, ಮನದಲ್ಲಿ ಶಿವಾಯನಮಃ ಶಿವಾಯ ನಮಃ ಎಂದು ಜಪಿಸು" ಎಂದು ಹೇಳಿಕೊಟ್ಟರು. ಇವನು ಹಾಗೆ ಮಾಡಿದನು. ಸುಮಾರು ಒಂದು ಮಿನಿಟಿನ ಮೇಲೆ "ಏನು ಕಾಣಿಸುವದು" ಎಂದು ಕೇಳಿದರು. ಇವನು "ಏನೂ ಇಲ್ಲ" ಎಂದನು. ಹಾಗೇ ಜಪಿಸೆಂದು ಹೇಳಿ, ತುಸು ತಡೆದು ಮತ್ತೆ ಕೇಳಿದರು. ಇವನೂ ಮತ್ತೆ ಅದೇ ಉತ್ತರವನ್ನು ಹೇಳಿದನು. ಮತ್ತೆಮತ್ತೆ ಅದೇ ಕ್ರಮ, ಮತ್ತೆಮತ್ತೆ ಅದೇ ಉತ್ತರ. ಕೊನೆಗೆ ಅವರೇ ಅಂದರು – "ಮೂಗಿನ ತುದಿಯ ಹತ್ತರ ತುಸು ಮಸಮಸಕು ಬೆಳಕು ಕಾಣುವದಿಲ್ಲವೇ?" ಅದಕ್ಕೆ ಇವನು ಇಲ್ಲವೆಂದನು. ಹಾಗೇ ಜಪಿಸೆಂದು ಮತ್ತೆ ಹೇಳಿ

ದರು. ತುಸು ತಡೆದು ಮತ್ತೆ ಕೇಳಿದರು. ಮತ್ತೆಮತ್ತೆ ಅದೇ ಕ್ರಮ. ಮತ್ತೆಮತ್ತೆ ಅದೇ ಅದೇ ಉತ್ತರ. ಕೊನೆಗೆ ಈತನು ಬೇಸತ್ತು ಕಾಣಿಸುವದೆಂದು ಸುಮ್ಮನೆ ಒಪ್ಪಿಕೊಂಡನು. ಆಗ ಮುಂದಿನ ದರ್ಶನಕ್ಕೆ ಪ್ರಯತ್ನ ನಡೆಯಿತು! ಹೀಗೇ ಜಪಿಸು, ಈಗೇನು ಕಾಣಿಸು ವದು? ಎಂದರು. ಏನೂ ಇಲ್ಲ, ಅಷ್ಟೇ– ಎಂದು ಇವನ ಉತ್ತರ. ಮತ್ತೆಮತ್ತೆ ಯಥಾಕ್ರಮದಿಂದ ಕೇಳಿಕೇಳಿ ಹೇಳಿ ಬೇಸರಿಟ್ಟಿತು. ಆಗ ಅವರೇ "ಒಂದು ಮೂರ್ತಿ ಕಾಣುವದಿಲ್ಲವೇ?" ಎಂದರು. ಇವನು ಏನೋ ಸಾರಿ ಇಲ್ಲವಿಲ್ಲವೆಂದು ಹೇಳಿ ಕೊನೆಗೆ ಮುಂಚಿನಂತೆ ಇದನ್ನೂ ಸುಮ್ಮನೆಯೇ ಒಪ್ಪಿಕೊಂಡನು. ಆಗ ಉಭಯರೂ ಒಮ್ಮೆ ಕೃತಾರ್ಥರಾಗಿ ಪಾರಾದರು!! ಗುರುಗಳು ಶಿಷ್ಯನಿಗೆ "ಹೀಗೆ ದಿನಾಲು ನೇಮಕ್ಕೆ ಕೂಡುತ್ತಿರು; ಮಹಾದೇವರು **ಹೀಗೇ** ದರ್ಶನ ಕೊಡು ತ್ತಾರೆ" ಎಂದು ಹೇಳಿ ಮುಕ್ತನನ್ನಾಗಿ ಮಾಡಿದರು. ಊರಲ್ಲಿ ಎಷ್ಟು ಜನರು ದೇವರನ್ನು ಕಂಡವರಾಗಿದ್ದರೋ ಅವರೆಲ್ಲರ ಕ್ರಮವೂ ಇದೇ ಆಗಿದ್ದಿತು. ಆಗ ಜ್ಞಾನಭಿಕ್ಷುವಿಗೆ ಇಂಥ ಗುರೂಪದೇಶಕ್ಕಿಂತ ತನಗೆ ತಿಳಿದಂತೆ ತಾನು ಸಾಗುವದೇ ಮೇಲೆಂದೆನಿಸಿತು. ಪರಮಾತ್ಮನೇ ಸರ್ವ ಪೂರ್ವಿಕರ ಪರಮ ಗುರುವು. "ಪೂರ್ವೇಷಾಮಪಿಗುರುಃ"



# ೨. ಮೂರ್ತಿಪೂಜೆ.

ಜ್ಞಾನಭಿಕ್ಷುವಿನ ಬುದ್ಧಿ ಚುರುಕು, ಮನಸು ಹರಕು. ನಿಗ್ರಹ ಕಿರಿದು, ಗ್ರಾಹಕತೆ ಹಿರಿದು. ಇವನು ಸಾಲೆಯಲ್ಲಿ ಓದುತ್ತಿರುವಾಗ ಇವನ ಪಠ್ಯ ಪುಸ್ತಕದ ಒಂದು ಪಾಠದಲ್ಲಿ **" ಆ ಚಿಚ್ಛಕ್ತಿಗೇ ದೇವರೆನ್ನುವರು. "** ಎಂಬ ವಾಕ್ಯವೊಂದು ಲಕ್ಷ್ಯಕ್ಕೆ ಬಂತು. ಇಂಥ ವಾಕ್ಯಗಳ ನಿಜವಾದ ಅರ್ಥವು ಶಿಕ್ಷಕರಿಗೂ ಅರಿದು, ವಿದ್ಯಾರ್ಥಿಗಳಿಗೂ ಅರಿದು. ತಿರುಗಿ ಕೇಳಿದರೆ ಬುಕ್‍ಕಮಿಟಿಯವರಿಗೂ ಅರಿದು. ಅಷ್ಟೇಕೆ? ಒಳ್ಳೊಳ್ಳೇ ಜಗದ್ಗುರುಗಳಿಗೂ ಅರಿದು! ಆದಾಗ್ಯೂ ಪರಂಪರಾಪ್ರಾಪ್ತವಾಗಿ ಪುಸ್ತಕದಲ್ಲಿ ಬಂದ ವಾಕ್ಯಕ್ಕೆ ಏನಾದರೊಂದು ಅರ್ಥವನ್ನು ಮಾಡಿಕೊಳ್ಳಲೇ ಬೇಕಾಗುವದಲ್ಲವೇ? ಜ್ಞಾನಭಿಕ್ಷುವಿಗೆ ಆಗ ಹದಿನೇಳು ವರುಷ. ಅವನ ಬುದ್ಧಿಗೆ ಅದರ ಅರ್ಥವು ಹೇಗೆ ಹೊಳೆಯಿತೆಂದರೆ – " ಜಗತ್ತಿನಲ್ಲಿರುವ ಗಾಳಿ, ಗುಡುಗು ಮುಂತಾದ **ಅಂಥ ಜಡಶಕ್ತಿಗಳಿಗೇ ದೇವರೆನ್ನುತ್ತಾರೆ;** ಬೇರೆ ದೇವರೆಂಬವನೇ ಇಲ್ಲ. ಆಯುಧ ಧರಿಸಿದ ಹೆಣ್ಣುಗಂಡು ದೇವತಾಮೂರ್ತಿಗಳೆಲ್ಲ ಕಲ್ಪನಾರಾಶಿಗಳು. ಅವು ಹೇಳೀ ಕೇಳೀ ಕಲ್ಲುಬಂಡೆಗಳು. ಪುರಾಣದ ಕಥೆಗಳೆಲ್ಲಾ ಜನರಿಗೆ ಬೆದರಿಕೆ ಹಾಕಿ ಪರಸ್ಪರರ ಸುಖಕ್ಕೆ ಸಾಧನವಾದ ನೀತಿಯು ಕಡೆಗೆಳೆಯುವದಕ್ಕಾಗಿ ರಚಿಸಿದ ಸುಳ್ಳು ಕಥೆಗಳ ಸಂಗ್ರಹವು."

ಆ ಮೇಲೆ ಕೇಳುವದೇನು? ಇಂಥ ಬುದ್ಧಿಗಳು ಯಾವುದರಲ್ಲಿ ಸೇರಿದರೂ ರಾಕ್ಷಸ ಹೊಕ್ಕಂತೆ ಮಾಡುವದು ಸ್ವಾಭಾವಿಕ. ನಮ್ಮ ಜ್ಞಾನಭಿಕ್ಷುವು ಪ್ರಚಂಡ ನಾಸ್ತಿಕನಾದನು. ಕೊರಳಲ್ಲಿಯ ಧರ್ಮ ಚಿಹ್ನವನ್ನು ಕಿತ್ತಿ ಹಾಕಿದನು. ಗುರುಜಾತಿಯವರ ಕಾಲಿಗೆ ತಲೆ

ಯೆನ್ನು ಬಾಗಿಸಲು ಒಪ್ಪದಾದನು. ಕುಲಾಚಾರಗಳನ್ನು ಮನೆಯಲ್ಲಿ ನಡೆಯಿಸಗೊಡದಾದನು. ಹೀಗಾಗಿ ಒಳಗೂ – ಹೊರಗೂ ಕೂಡೇ ಗಲಾಟೆ ನಡೆಯಿತು.

ಕೆಲಕೆಲವು ಹಳ್ಳಿಪಳ್ಳಿಗಳಲ್ಲಿಯೂ, ತೀರ್ಥಕ್ಷೇತ್ರಗಳಲ್ಲಿಯೂ ನೆಲಿಸಿರುವ ದೇವರುಗಳನ್ನು ಜನರು "ಜಾಗೃತ" ದೇವರೆಂದು ಹೇಳುತ್ತಿರುತ್ತಾರೆ. ಅಲ್ಲಿ ದೇವರು ಬಹಳ ಜಾಗೃತನಾಗಿ ಇದ್ದಾನೆಂತಲೂ, ಅಲ್ಲಿ ಅಘಟಿತ ಲೀಲೆಗಳು ನಡೆಯುತ್ತಿರುತ್ತವೆಂತಲೂ ಜನರು ಹೇಳುತ್ತಿರುವದುಂಟು. ಜ್ಞಾನಭಿಕ್ಷುವು ಅಂಥಲ್ಲೆಲ್ಲಾ ಹೋಗಿ ಪರೀಕ್ಷೆಗಾಗಿ ಆ ದೇವತಾಮೂರ್ತಿಗಳಿಗೆ ಏನಾದರೊಂದು ಕುಚೋದ್ಯವನ್ನು ಮಾಡಿ – "ನೀನು ಜಾಗೃತವಾಗಿದ್ದರೆ, ನನಗೇನೇನು ಮಾಡುವಿಯೋ ನೋಡೋಣ" ಎಂದು ಹೇಳಿ ಬರುತ್ತಿದ್ದನು. ಅದರಿಂದ ಅವನಿಗೆ, ಜನರು ತಿಳಿದುಕೊಂಡಿರುವಂಥ ಯಾವ ಕೇಡೂ ಆಗದೆ ಹೋಗುತ್ತಿರಲು, ಅವನು ಜನರಲ್ಲೆಲ್ಲ ಆ ಸಂಗತಿಗಳನ್ನು ಕಥೆಮಾಡಿ ಹೇಳಿ, ಕಲ್ಲುದೇವರುಗಳ ಗೇಲಿಯನ್ನೆಬ್ಬಿಸುತ್ತಿದ್ದನು. ಹಳ್ಳಿಯ ಊರಲ್ಲಿ ಈತನೊಬ್ಬ ಹೆಚ್ಚು ಜಾಣನೆನಿಸಿಕೊಳ್ಳುವ ಚುರುಕು ಹುಡುಗನಾದ್ದರಿಂದ ಯಾರೂ ಪ್ರತ್ಯಕ್ಷವಾಗಿ ಇವನನ್ನು ಇದಿರಿಸುತ್ತಿರಲಿಲ್ಲವಾದರೂ '**ಪಾದ್ರಿಯ ಮರಿ**' ಎಂದು ಹಿಂದೆ ಬೇಕಾದಷ್ಟು ಹಳಿಯುತ್ತಿದ್ದರು.

ಡಂಭಾಚಾರದ ಗುರುಜಾತಿಯನ್ನೂ, ಬಂಡೆಗಲ್ಲಿನ ದೇವರುಗಳನ್ನೂ ನೋಡಿದರೆ ಈತನ ಹೊಟ್ಟೆಯಲ್ಲಿ ಉರಿಯೇಳುತ್ತಿತ್ತು. ಕೆಲಸಕ್ಕೆ ಬಾರದ ರಂಬಾಟವು ಲೋಕದಲ್ಲಿ ಎಷ್ಟೊಂದು ತಲೆಯೆತ್ತಿ ದಬ್ಬಾಳಿಕೆಯನ್ನು ನಡೆಯಿಸಿದೆಯಲ್ಲಾ! ಎಂದು ಚಡಪಡಿಸುತ್ತಿದ್ದನು. ಗುರಗುಟ್ಟಿ ಅಂಜಿಸಿ ಹೊಟ್ಟೆಹೊರಕೊಳ್ಳುವ ಪುರೋಹಿತಜಾತಿಯ ಮೇಲೆ ಜನಾಂಗವು ಮೂಢ ಶ್ರದ್ಧೆಯನ್ನಿಟ್ಟು, ಪುಣ್ಯ ಬರುವದೆಂದು

ಸಾಲಕ್ಕೆ ಕುತ್ತಿಗೆಯನ್ನು ಕೊಟ್ಟೂ ಕೂಡ ಸಮಾರಾಧನೆಗಳನ್ನು ಮಾಡಿಸುತ್ತಿರುವದನ್ನು ನೋಡಿದರಂತೂ ಈತನ ತಲೆ ತಿರುಗಿ ಹೋಗುತ್ತಿತ್ತು.

ಇವನ ಅಜ್ಜಮುತ್ತಂದಿರು ಆಗರ್ಭಶ್ರೀಮಂತರಿದ್ದದ್ದರಿಂದ ಪುಣ್ಯಕಾರ್ಯವೆಂದು ಎಷ್ಟೋ ಗುಡಿಗುಂಡಾರಗಳನ್ನು ಕಟ್ಟಿಸಿದ್ದರು. ಆ ದೇವರುಗಳಿಗೆ ವಿಜೃಂಭಣೆಯ ವಾರ್ಷಿಕ ಉತ್ಸವಗಳನ್ನು ಏರ್ಪಡಿಸಿ ರೂಢಿಗೆ ತಂದಿದ್ದರು. ಈಗ ಅವರ ಮನೆತನಕ್ಕೆ ಇಳಿಗಾಲ ಬಂದದ್ದರಿಂದ ಅಂಥ ಕಾರ್ಯಗಳೆಲ್ಲಾ ಹೊರಲಾರದ ಹೊರೆಯಾಗಿದ್ದವು ಉತ್ಸವ, ಸಮಾರಾಧನೆಗಳಿಗಾಗಿ ಸಾಲ ಮಾಡಿ, ತೀರಿಸದ ಭಾರವಾಯಿತು. ಆದರೂ ಮನೆಯವರು ಪೂರ್ವಾಚಾರವನ್ನು ಬಿಡಲಿಕ್ಕೆ ಬಾರದೆಂದು ಹಾಗೇ ಕರುಳುಹರಕೊಂಡು ಎಳೆಯುತ್ತಿದ್ದರು. ಇದರಿಂದ ಜ್ಞಾನಭಿಕ್ಷುವಿನ ಪಿತ್ತವು ಇನ್ನಷ್ಟು ತಲೆಗೇರಿತು. ಇದನ್ನೆಲ್ಲಾ ನಿಲ್ಲಿಸಿ ಬಿಡಬೇಕೆಂದರೆ ಮನೆಯವರು ಒಪ್ಪದಾದರು. ಜನರು ಬೆದರಿಕೆ ಹಾಕಿ, ಬಿಡಗೊಡದಾದರು. ಆಗ ಇಂಥದೊಂದು ವಾರ್ಷಿಕೋತ್ಸವದ ಕಾಲದಲ್ಲಿ ಈತನು ತನ್ನ ಮನೆಯವರಿಗೆ – "ನೀವೇನಾದರೂ ಮಾಡಿಕೊಳ್ಳಿರಿ; ಆದರೆ ನನ್ನನ್ನು ಮಾತ್ರ ಯಾವುದಕ್ಕೂ ಕರೆಯಬೇಡಿರಿ. ನನಗೀಗ ಇದನ್ನು ಮಾಡುವ ಮನಸ್ಸಿಲ್ಲ; ನಿಲ್ಲಿಸುವ ಶಕ್ತಿಯಿಲ್ಲ. ಈ ನಾಲ್ಕು ದಿನ ನಾನು ಮನೆಗೆ ಬಾರದೆ ಆಚೆಯ ಓಣಿಯಲ್ಲಿ ಎಲ್ಲಿಯಾದರೂ ಗೆಳೆಯರ ಮನೆಯಲ್ಲಿ ಇರುವೆನು" ಎಂದು ಹೇಳಿದನು. ಸಮಾರಾಧನೆಯೂ, ಉತ್ಸವವೂ ಹೆಚ್ಚುಕಡಿಮೆ ಹೇಗಾದರೂ ನಡೆದವು. ಕೊನೆಯ ದಿನ ರಥೋತ್ಸವ. ಅಂದು ಇವರ ಮನೆತನದವರೇ ರಥದ ಬಲಿಯ ನೈವೇದ್ಯವನ್ನು ಹೊರಬೇಕೆಂಬ ಪೂರ್ವಾಚಾರದ ನಿಯಮವಿತ್ತು. ಮನೆಯಲ್ಲಿ ಈತನೊಬ್ಬನೇ ಮಗನು. ಬೇರೆ ಬಾಂಧವರಿದ್ದರೂ ಆ ಪ್ರಸಂಗಕ್ಕೆ ಒದಗಿರಲಿಲ್ಲ. ಊರವರೂ,

ಮನೆಯವರೂ ಕೂಡಿಯೇ ಇವನಿದ್ದಲ್ಲಿಗೆ ಬಂದು ಬಂದು, ಉಲಿಯ ಹತ್ತಿದರು. ಬಂತಲ್ಲ ಸಂಕಟ! ತಲೆ ಕಾಯ್ದಾಗ ಮನುಷ್ಯನಿಗೆ ಯುಕ್ತಿಗಳು ಹೊಳೆಯುವದಿಲ್ಲ. ಈ ಉತ್ಸವವನ್ನೇ ನಡಿಸಬಾರದೆಂದು ಹವಣಿಸಿ ನಿಷ್ಫಲವಾದ್ದರಿಂದ ಜ್ಞಾನಭಿಕ್ಷುವಿನ ತಲೆ ಮಂಕುಹಿಡಿದು ಹೋಗಿತ್ತು. ಆ ಸಮಯದಲ್ಲಿ ಈತನು ಊರನ್ನೇ ಬಿಟ್ಟು ಹೋಗಿದ್ದರೆ, ಏನಾಗುತ್ತಿತ್ತೋ ಆಗುತ್ತಿತ್ತು. ಆದರೆ ಹಾಗೆ ಹೊಳೆಯದೆ ಇದ್ದದ್ದರಿಂದ ಇಲ್ಲಿಗೆ ಬಂದು ನಿಂತಿತು. ಎಷ್ಟು ಬಲ್ಲೆನೆಂದರೂ ಕೇಳದೆ ಹಿರಿಯರೆಂಬವರೆಲ್ಲ ಜುಲುಮೆಯಿಂದ ಬಲಿಪಾತ್ರೆಯನ್ನು ಹೊರಲಿಕ್ಕೆ ಹಚ್ಚಿದರು. ಅಜ್ಞಾನಿಗಳಾದ ಕಾಮುಜನರಿಗುಚಿತವಾದ ಪರಿಮಾಣದಲ್ಲಿ ಸುಚ್ಚುತುಂಬಿದ ಬಲಿಪಾತ್ರೆಯನ್ನು ಹೊರುವ ಪ್ರಸಂಗವು ತನಗೆ ಬಂದದ್ದರಿಂದ ಜ್ಞಾನಭಿಕ್ಷುವಿಗೆ, ಅಜ್ಞಾನಕ್ಕೇ ಲೋಕದಲ್ಲಿ ಗೆಲುವಿರುವುದನ್ನು ನೋಡಿ ಅತಿಶಯ ಸಂತಾಪವೇರಿತು. ಕಣ್ಣೊಳಗಿಂದ ಬಂದೇಸವನೆ ನೀರು ಧಾರೆಯಾಗಿ ಹರಿಯಹತ್ತಿದವು. ಇದನ್ನು ನೋಡಿ, ಸುತ್ತುಮುತ್ತಲಿನ ಜನರು – ಆಹಾ! ದೈವ್ವ ತಟ್ಟಿಸಿತು!" ಎಂದು ಗಾಬರಿಗೊಳ್ಳುತ್ತ ಕುಲಗುರುವೆಂಬವನ ಕಾಲು ತೊಳೆದ ನೀರನ್ನು ಪಾದೋದಕವೆಂದು ಕಣ್ಣಿಗೆ ಸವರಿ, ಲಿಂಬೇ ಹಣ್ಣುಗಳನ್ನು ನಿವಾಳಿಸಿ ಒಗೆಯಹತ್ತಿ ಉಘೇ ಉಘೇ ಎಂದು ಕೂಗಹತ್ತಿದರು. ಆಗ ಗಾಯದ ಮೇಲೆ ಬರೆ ಹಚ್ಚಿದಂತಾಗಿ ಈತನ ಸಂತಾಪವು ಮತ್ತಿಷ್ಟು ಮಿತಿಮಿಾರಿತು. ಆದರೂ ಮೌನದಿಂದಿರಬೇಕೆಂಬ ಬಂಧನ! ಹಾಗೇ ವಾದ್ಯಘೋಷ, ಜನಘೋಷದೊಂದಿಗೆ ಚಡಪಡಿಸುತ್ತಲೂ, ಲೋಕದ ಅಜ್ಞಾನಕ್ಕೆ ವಿಕಟಹಾಸ್ಯಕ್ಕೆ ಬದಲು ಪರಿತಪಿಸುತ್ತಲೂ, ಕಣ್ಣೀರಿಡುತ್ತಲೂ ಮುಂದೆ ಹೆಜ್ಜೆ ಹಾಕುತ್ತಿದ್ದನು. ಮೆರವಣಿಗೆಯು ಕೊನೆಗೆ ನಿಶ್ಚಿತ ಸ್ಥಳಕ್ಕೆ ಮುಟ್ಟಿತು. ಅಲ್ಲಿ ಶೃಂಗರಿಸಿದ ರಥದ ಹತ್ತರ ಗ್ರಾಮದಜನರು ಅಪಾರವಾಗಿ ನಿಂತು ಕೂಗಾಡುತ್ತಿದ್ದರು. ಆಗ

ಈತನ ಮನಸ್ಸಿನಲ್ಲಿ “ ಅಯ್ಯೋ ಇವರಲ್ಲಿ ದೇವರ ನಿಜವಾದ ಅಸ್ತಿತ್ವವನ್ನಾದರೂ ಎಷ್ಟು ಜನರು ಒಪ್ಪುವರು! ಅಂಧಪರಂಪರೆಯಿಂದ ಎಷ್ಟು ಉಬ್ಬುಬ್ಬಿ ಕುಣಿಯುವರಲ್ಲಾ! ಇವರು ಮಹಾನೀಚ ಕಾರ್ಯಗಳನ್ನೆಲ್ಲ ಹೇಸದೆ ಮಾಡುತ್ತಿದ್ದರೂ, ಆಂಥ ಪಾಪವೃತ್ತಿಯನ್ನೆಲ್ಲ ಮುಚ್ಚಿಟ್ಟು ಪುಣ್ಯಪ್ರಾಪ್ತಿಯ ನೆವಮಾಡಿ, ಕಲ್ಲಿನಮುಂದೆ ಹೋಗಿ ಕೂಗಿಕೊಳ್ಳುತ್ತಿರುವರಲ್ಲಾ! ಆದರೂ ಜಗತ್ತಿನಲ್ಲಿ ಇವರ ಮಾತೇ ಗೆದೆಯುವದಲ್ಲಾ!” ಹೀಗೆಂದು ಪರಿಪರಿಯಿಂದ ನೊಂದುಕೊಂಡು ಮರುಗಹತ್ತಿದನು. ಅಷ್ಟರಲ್ಲಿ ನೆರೆದವರಲ್ಲಿ ಮುಂದಾಳುಗಳೆಂಬವರು ಮುಂದೆ ಬಂದು ‘ಈತನ ಮೈಯಲ್ಲಿ ದೇವರು ಬಂದಿರಬೇಕು’ ಎಂದು ಜ್ಞಾನಭಿಕ್ಷುವನ್ನು ತಟ್ಟಿ, ಗಟ್ಟಿಸಿಗಟ್ಟಿಸಿ ಮಾತನಾಡಿಸಿದರು. ಕೂಡಲೇ ತಲೆಗೇರಿದ್ದ ಸಂತಾಪವು ದುಮುಕಿದ್ದರಿಂದ ಒಂದೇ ಸವನೆ ದೊಡ್ಡ ಧ್ವನಿಯು ಅಳುವು ಹೊರಸೂಸಹತ್ತಿತು. ಆಗ ನೆರೆದವರೆಲ್ಲ ಬೆರಗಾಗಿ, “ದೇವರು ಬಹಳ ಮುನಿದಿದ್ದಾನೆ” ಎಂದು ಈತನ ಮುಂದೆ ಮಂಗಳಾರತಿಯನ್ನೆತ್ತಿ ಭಜನವನ್ನು ಆರಂಭಿಸಿದರು! ಆದರಿಂದ ಈತನಿಗೆ ಮತ್ತಿಷ್ಟು ವಿಕಟರೋಷ ಹೆಚ್ಚಾಗಿ ಎಚ್ಚರದಪ್ಪಲು, ಇವನ ಗೆಳೆಯರು ಇವನನ್ನು ಹೊತ್ತು ತಂದು ಮನೆಗೆ ಹಾಕಿದರು. ಮನೆಯವರು ಮಗನಿಗೆ ಗುಣವಾಗಲೆಂದು ಕುಲದೇವರಿಗೆ ಮತ್ತೆ ಎಂಥಾದ್ದೋ ಒಂದು ಅತಿ ದೊಡ್ಡ ಸಮಾರಾಧನೆ ಮಾಡಿಸುವ ಹರಕೆಯನ್ನು ಹೊತ್ತರು! ಹಳ್ಳಿಯೊಳಗಿನ ಬಲ್ಲವರೆಲ್ಲ ನೆರೆದು ನಾಡಿಗಳನ್ನು ಮುಟ್ಟಿ ನೋಡಿ, — “ಅಹಾ! ಭೂತನಾಡಿ ಹಾರುತ್ತಿದೆ!” ಎಂದು ನಿಶ್ಚಯಿಸಿ ಅದರ ಸಲುವಾಗಿ ಎಷ್ಟೋ ಅತ್ಯಾಚಾರದ ಉಪಾಯಗಳನ್ನು ಯೋಜಿಸಿದರು!!!

---

# ೩. ವೈರಭಕ್ತಿಯ ತೀವ್ರಫಲ.

ಪೌರಾಣಿಕಕಥೆಯ ಜಯವಿಜಯರ ಶಾಪಪ್ರಕರಣದಲ್ಲಿ “ದೇವನ ದಾಸರಾಗಿ ಏಳು ಜನ್ಮ ಕಳೆಯುವಿರೋ? ಶತ್ರುಗಳಾಗಿ ಮೂರು ಜನ್ಮ ಕಳೆಯುವಿರೋ?” ಎಂದು ಕೇಳಿದ ಪ್ರಶ್ನದಲ್ಲಿ ಒಳ ಅರ್ಥವಿದೆಯೆಂದು ಹೇಳಬಹುದು. ಸಖ್ಯಕ್ಕಿಂತ ವೈರದಲ್ಲಿ ಮನಸ್ಸಿನ ಕಾರ್ಯವು ಹೆಚ್ಚಾಗಿ ಪ್ರಖರವಾಗಿರುವದು ಸ್ವಾಭಾವಿಕ. ಗೀತೆಯಲ್ಲಿ ಹೇಳಿದ “ಮಯ್ಯೇವ ಮನ ಆಧತ್ಸ್ವ—ನನ್ನಲ್ಲೇ ಚಿತ್ತವನ್ನಿಡು” ಎಂಬ ಮಾತು ಪ್ರೇಮಭಕ್ತಿಯಂತೆ ವೈರಭಕ್ತಿಯಲ್ಲಾದರೂ ನೆರವೇರುತ್ತದೆ. ಇಷ್ಟೇ ಅಲ್ಲ, ಪ್ರಿಯವ್ಯಕ್ತಿಗಿಂತ ಶತ್ರುವಿನ ವಿಷಯದಲ್ಲಿ ಚಿತ್ತವು ಸದಾ ಹೆಚ್ಚು ಜಾಗೃತವಾಗಿ ಇರುತ್ತದೆ. ಅಧೀರಭಕ್ತರಿಗೆ ಅಸಹನೆ ಹೆಚ್ಚಾಗಿರುವದರಿಂದ ಅವರು ಜಗತ್ತಿನಲ್ಲಿಯ ಪರಿಪರಿಯ ವೈಷಮ್ಯಗಳಿಂದ ಜರ್ಜರಿತರಾಗಿ, ವಿಶ್ವಚಾಲಕ ಶಕ್ತಿಯನ್ನು ಪ್ರಖರವಾಗಿ ಶಪಿಸುತ್ತಿರುವದೇ ಬಹುಕಾಲದ ಕಾರ್ಯವಾಗಿ ಬಿಡುತ್ತಿರುತ್ತದೆ. ಆದರೆ ಧೀರಭಕ್ತರ ಮಾತು ಇದಕ್ಕಿಂತ ಬೇರೆಯಾಗಿದೆಯಾದರೂ ಪ್ರಖರಭಕ್ತರೇ ದೇವನ ಒರೆಗಲ್ಲಾಗಿದ್ದಾರೆ. ನಮ್ಮ ಜ್ಞಾನಭಿಕ್ಷುವಿನ ಭಕ್ತಿ ಈ ವರ್ಗದ್ದು.

ಈತನ ಪಾಷಂಡತನವು ಒಂದೆರಡು ವರುಷ ಸಾಗಿರುವಷ್ಟರಲ್ಲಿಯೇ ಶ್ರೀವಿವೇಕಾನಂದ ಸ್ವಾಮಿಗಳ ಜೀವನಚರಿತ್ರದ ಪುಟ್ಟ ಪುಸ್ತಕವೊಂದು ಇವನ ಕೈಗೆ ಬಿತ್ತು. ಅದರಿಂದ ಜ್ಞಾನಭಿಕ್ಷುವಿನ ಜೀವನದಲ್ಲಿ ವಿಲಕ್ಷಣ ಪರಿವರ್ತನವಾಯಿತು. ಯಾಕಂದರೆ ವಿವೇಕಾನಂದರು ಪ್ರಚಂಡಬುದ್ಧಿಯ ನಾಸ್ತಿಕಸಾಧಕರು. ಅಂಥ ಘೋರ ನಾಸ್ತಿಕ್ಯವನ್ನು ನೀಗಿ ದೇವರಿದ್ದಾನೆಂಬದನ್ನು ಕಂಡುಂಡು, ತೀವ್ರ

ವಿಮರ್ಶಕರಾದ ಬುದ್ಧಿಪ್ರಧಾನ ಪಾಶ್ಚಾತ್ಯ ಜನಾಂಗದವರಿಗೆ ಒಡಂಬಡಿಕೆಯಾಗುವಂತೆ ಗರ್ಜಿಸಿದ ಸಿಂಹನೆಂದರೆ ಇವರೇ. ನಾಸ್ತಿಕತೆಯ ದರಿಯೊಳಗಿಂದ ಪಾರಾಗಿ, ಆಸ್ತಿಕತೆಯ ಶಿಖರವನ್ನೇರಿದ ಇವರ ಕಥೆಯೂ, — ಅದರಲ್ಲಿಯೂ ಮೂಢ ವಿಶ್ವಾಸವಿಲ್ಲದ ಜಾಗೃತಬುದ್ಧಿಯ ಸಾಧಕರ ಕಥೆಯೂ, — ಮೇಲಾಗಿ ವೀರತಾರ್ಕಿಕರ ದೇಶದಲ್ಲಿ ಹೌದೆನಿಸಿಕೊಂಡವರ ಕಥೆಯೂ, ನಮ್ಮ ಜ್ಞಾನಭಿಕ್ಷುವಿನ ತಪ್ತಬುದ್ಧಿಗೆ ನೀರೆರೆದದ್ದರಲ್ಲಿ ಆಶ್ಚರ್ಯವೇನು? ಈಗ ಈತನು - ಆ ಜಡಶಕ್ತಿಗೇ ದೇವನೆನ್ನುವರು — ಎಂಬ ಹುದಲಿನೊಳಗಿಂದ ಪಾರಾಗಿ, **ಸರ್ವಜ್ಞನಾದ ಒಬ್ಬ ದೇವರಿರಲಿಕ್ಕೆಬೇಕೆಂಬ** ಗ್ರಹಿಕೆಗೆ ಬಂದನು.

ಆಗ ವಿವೇಕಾನಂದರ ಹೆಸರು ನೆನಪಾದರೆ ಒಂದು ಬಗೆಯ ವಿಶೇಷ ಆನಂದವಾಗಹತ್ತಿತು. ಅವರ ಭಾವಚಿತ್ರವನ್ನು ನೋಡುತ್ತ ನೋಡುತ್ತ ಎಷ್ಟೋ ಹೊತ್ತು ಅಗಾಧವೆನಿಸಹತ್ತಿತು. ದಿನಾಲು ತಪ್ಪದೆ ಅವರ ಚರಿತ್ರವನ್ನೇ ಧ್ಯಾನಿಸಹತ್ತಿದನು ತನ್ನ ಹಿಂದಿನ ಮಾನಸ ಪೂಜೆಯ ಕ್ರಮದಿಂದ ಈಗ ವಿವೇಕಾನಂದರನ್ನು ಧ್ಯಾನಿಸಿ — “ನೀನು ಪಡೆದ ಸ್ವಾನುಭವವನ್ನು ನನಗೂ ದಯಪಾಲಿಸೆಂ”ದು ಪ್ರಾರ್ಥಿಸ ತೊಡಗಿದನು. ಹೀಗೆ ವಿವೇಕಾನಂದರ ಚರಿತ್ರದ ಮೇಲೆ ಆಕರ್ಷಣವು ಹೆಚ್ಚಾದ ಹಾಗೆ ಅವರ ಗುರುಗಳಾದ ಶ್ರೀರಾಮಕೃಷ್ಣ ಪರಮಹಂಸರ ಚರಿತ್ರ ಮತ್ತು ವಚನಗಳ ಕಡೆಗೆ ಒಲವು ಹೊರಳಿತು. “ಸಂಸಾರಕ್ಕಾಗಿ ಕೊಡಕೊಡ ಕಣ್ಣೀರು ಸುರಿಸುವವರುಂಟು; ಪರಮಾತ್ಮಪ್ರಾಪ್ತಿಗಾಗಿ ತಳಮಳಿಸಿ ಅಳುವವರುಂಟೇ?” ಎಂದು ಗಟ್ಟಿಸಿ ಕೇಳುವ ಪರಮಹಂಸರ ವಾಕ್ಯಗಳು ಈತನನ್ನು ತಮ್ಮ ಬಲೆಯಲ್ಲಿ ಹಾಕಿಕೊಳ್ಳದೆ ಬಿಡಲಿಲ್ಲ. ಆಗ ಈತನಿಗೆ ಈ ಜನ್ಮದಲ್ಲಿ ಪರಮಾತ್ಮನ ಪ್ರತ್ಯಕ್ಷ ಅನುಭವವನ್ನು ಪಡೆಯುವದಕ್ಕಿಂತ ಹೆಚ್ಚಿನದೇನೂ ಇಲ್ಲವೆಂದು ಮನವರಿಕೆಯಾಗಹತ್ತಿತು.

ಲೋಕದಲ್ಲಿ ಇನ್ನಾವ ಬಂಧನವೂ ಇಲ್ಲದ ಜನರು, ಎಷ್ಟೋ ಸಿಗಬಹುದು. ಆದರೆ ಧರ್ಮಾಚಾರಗಳ ಬಂಧನಕ್ಕೆ ಒಳಪಡದ ತಂಡಗಳೇ ಇಲ್ಲ. ಎಲ್ಲಿ ಜನರಿದ್ದಾರೆಂದರೆ ಅಲ್ಲಿ ಏನಾದರೊಂದು ಕುಲಾಚಾರ–ಧರ್ಮಾಚಾರದ ರೂಢಿಯಿದ್ದೇ ಇದೆ. ಅದನ್ನು ಒಳಗೊಳಗೆ ಅವಿಶ್ವಸಿಸುತ್ತಿರುವವರು ನೂರಕ್ಕೆ ನೂರರಷ್ಟು ಸಿಗಬಹುದಾದರೂ, ಹೊರಗೆ ಅದನ್ನು ಏನಿದ್ದರೂ ಪೂರ್ವಾಚಾರವೆಂದು ಅನುಸರಿಸಬೇಕೆಂದೇ ಎಲ್ಲರ ನಿರ್ಧಾರ. ಜ್ಞಾನಭಿಕ್ಷುವು ಈ ದಬ್ಬಾಳಿಕೆಗೆ ಮೊದಲೇ ಬೇಸತ್ತವನು. ಈಗ ಈತನಿಗೆ ಅನಿಸಹತ್ತಿದ್ದೇನೆಂದರೆ— "ಎಲ್ಲಿ ಹೋದರೂ ಈ ಧರ್ಮವೆಂಬ ವಿಧಿ ನಮಗೆ ಬೆನ್ನು ಬಿಟ್ಟಿದ್ದಲ್ಲ! ಅದರ ವಕೀಲಿಯನ್ನು ಹೊತ್ತು ನಿಂತ ಪುರೋಹಿತರೂ, ಅವರ ದಬ್ಬಾಳಿಕೆಯಲ್ಲಿ ಜಬ್ಬಾದ ಮುಗ್ಧ ಅನುಯಾಯಿಗಳೂ ಈ ಭೂಮಂಡಲದಲ್ಲಿ ಎಲ್ಲಿ ನೋಡಿದಲ್ಲಿ ನಮಗಿಂತ ಮೊದಲೇ ಸಿದ್ಧರಿರುತ್ತಾರೆ!! ನಾವು ಏನು ಬಿಟ್ಟರೂ ಈ ಧರ್ಮವೆಂಬುವ ಕರಾಳನು, ಜೀವವಿರುವ ವರೆಗೆ ನಮ್ಮನ್ನು ಬಿಟ್ಟಿಪ್ಪನಲ್ಲ. ಜಗತ್ತಿನಲ್ಲೆಲ್ಲ ಒಂದಿಲ್ಲವೊಂದು ಬಗೆಯ ಧರ್ಮವು ಇದ್ದೇ ಇರುವದೆಂದ ಬಳಿಕ ಅದರ ಅಂಧ ಅನುಯಾಯಿಗಳನ್ನು ಕುರಿತು ಕುದಿಯುವದಕ್ಕಿಂತ, ಅದರ ಗಮ್ಯವಾದ ಪರಮಾತ್ಮನ ಸತ್ಯ ಸನ್ನಿಧಿಯನ್ನೇ ದೊರಕಿಸಲು ಯತ್ನಿಸಿದರೆ ಎಲ್ಲ ತೊಡಕುಗಳ ತಳಬೇರನ್ನೇ ಹುಡುಕಿದಂತಾಗುವದು."

ಹೀಗೆ ಎರಡು ಕಾರಣಗಳಿಂದ ಈತನಿಗೆ 'ಪರಮಾತ್ಮನ ಪ್ರತ್ಯಕ್ಷ ಸಾಕ್ಷಾತ್ಕಾರದ ಅಗತ್ಯವೆನಿಸಹತ್ತಿತು. ಸ್ವಾಮೀ ವಿವೇಕಾನಂದರ ಚರಿತ್ರದಿಂದ ದೇವರಿದ್ದದ್ದು ಸತ್ಯವೆಂದು ನಂಬಿದವನು, ಮತ್ತೆ ಈ ಪರಿಶೋಧನದ ಮುಡುಪಿಗೇಕೆ ಬೀಳಬೇಕು? ಪರಮಾತ್ಮನು ಸರ್ವಜ್ಞನಿದ್ದಾನೆಂದು ನಂಬಿದ ಮೇಲೆ ಸಾಮಾಜಿಕದ ದಬ್ಬಾಳಿಕೆಗೆ ಹೆಸರಿಡುತ್ತ ಮನದೊಳಗೆ ಕುದಿಯುವದರ ಅರ್ಥವೇನು? ಹೀಗೆಂದು ಪ್ರಶ್ನೆ ಬರುವದು ಸಹಜ.

ಆದರೆ ಮಾನವನ ಮನೋಧರ್ಮವು ಬಹಳ ವಿಲಕ್ಷಣವಾಗಿದೆ. ವಸ್ತುವಿನ ವರ್ಣನೆಯನ್ನು ಕೇಳಿದರೆ, ಒಂದುಬಗೆಯ ತೃಪ್ತಿಯು ಮೈದೋರುವದೆಂಬದೇನೋ ನಿಜ. ಆದರೆ ಅದಕ್ಕಿಂತ ಆ ವಸ್ತುವನ್ನು ಪ್ರತ್ಯಕ್ಷ ಕಾಣಬೇಕೆಂಬ ಕುತೂಹಲವೇ ಹೆಚ್ಚಾಗುತ್ತದೆ. ಕಾಶ್ಮಿರದ ನಂದನಶ್ರೀಯನ್ನೂ, ಹಿಮಾಲಯದ ಅಗಾಧ ದೃಶ್ಯವನ್ನೂ ವರ್ಣಿಸುವ ಪ್ರವಾಸವೃತ್ತಾಂತದ ಪುಸ್ತಕಗಳನ್ನೋದುವದರಿಂದ ಅವುಗಳನ್ನೊಮ್ಮೆ ಜನ್ಮದಲ್ಲೊಂದಾದರೂ ನೋಡಿ ಬರಬೇಕೆಂಬ ಆಕಾಂಕ್ಷೆಯು ಮೊಳೆಯುವದಿಲ್ಲವೇ ? ಪ್ರವಾಸಿಯು ಲೇಖನವು ಸಟೆಯೋ, ದಿಟವೋ ಎಂಬ ಪರೀಕ್ಷೆಗಾಗಿ ಅಲ್ಲಿಗೆ ಹೋಗಲೆಳಸದೆ–ಅವರ ಶಬ್ದಚಿತ್ರಗಳ ಸವಿಯನ್ನು ಪ್ರತ್ಯಕ್ಷವಾಗಿ ಅನುಭವಿಸಬೇಕೆಂಬ ಆಶೆ ಹೆಚ್ಚಿ, ಅತ್ತ ಪ್ರವಾಸ ಮಾಡಲಿಚ್ಛಿಸುತ್ತೇವಲ್ಲವೇ ? ಮೊದಲು "ಅದು" ಇದ್ದದ್ದೇ ಸತ್ಯವೋ–ಮಿಥ್ಯವೋ ಎಂದು ಸಂದೇಹ ಪಟ್ಟುಪಟ್ಟು ಕೊನೆಗೆ ಪ್ರಾಮಾಣಿಕ ಪ್ರವಾಸಿಗಳ ವೃತ್ತದಿಂದ ಅದರ ಅಸ್ತಿತ್ವದ ಬಗೆಗೆ ನಿಸ್ಸಂದೇಹಿಗಳಾಗುವೆವಲ್ಲದೆ, ನಮಗೆ ಅದರ ನಿಜ ಸುಖದ ಆಶೆಯು ಹೆಚ್ಚುತ್ತದೆ. ಗೀತೆಯಲ್ಲಿ "ಸರ್ವಮೇತದೃತಂ ಮನ್ಯೇ" ಎಂದ ಅರ್ಜುನನೇ "ದ್ರಷ್ಟುಮಿಚ್ಛಾಮಿತೇ ರೂಪಂ" ಎಂದು ಹೇಳುವನು.

ಇನ್ನೊಂದು ಮಾತೇನೆಂದರೆ, ಈ ಜಗತ್ತಿನಲ್ಲಿ ಪೂರ್ಣತೆಗೆ ಮುಟ್ಟಿದ ಜೀವಿಗಳು ಅತ್ಯಂತ ವಿರಳವಾಗಿದ್ದು, ಅಪಕ್ವಜೀವಿಗಳೇ ಹೇರಳವಾಗಿರುವದರಿಂದ ಎಲ್ಲಿ ನೋಡಿದಲ್ಲಿ–ಸ್ವಾರ್ಥ, ಅನ್ಯಾಯ, ಮೋಸ, ಕೊಲೆ, ಕಷ್ಟ, ದುಃಖ ಇಂಥ ದಾರುಣ ವೈಷಮ್ಯಗಳ ದಾಳಿಯೇ ಒಡೆದು ಕಾಣಿಸುತ್ತಿರುತ್ತದೆ. ಈ ಅಕಾಂಡತಾಂಡವದಲ್ಲಿ ಸಮರಸದ ಸೂತ್ರವೇ ಸಿಗುವದಿಲ್ಲ. ಹೀಗಾಗಿ ಮಾನವಬುದ್ಧಿಯು ಭ್ರಮಿಸಿ ಹೋಗುತ್ತದೆ. ಆಗ ಜೀವನದ ಉದ್ದೇಶವೇ ಹೊಳೆಯದಂತಾಗುತ್ತದೆ. ವೈಷಮ್ಯದ ಅರ್ಥವೇ ತಿಳಿಯದಂತಾಗುತ್ತದೆ. ಇದ

ರಿಂದ ಆಸ್ತಿಕಜೀವವು ಕೂಡ–"ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ ನಹಿ ಪ್ರಜಾನಾಮಿ ತವಪ್ರವೃತ್ತಿಂ——ಆದಿಕಾರಣನಾದ ನಿನ್ನನ್ನು ಅರಿಯಲಿಚ್ಛಿಸುವೆನು. ನಿನ್ನ ಪ್ರವೃತ್ತಿಯನ್ನು ನಾನರಿಯೆನಲ್ಲಾ !! " ಎಂದು ದೇವನಲ್ಲಿ ಮೊರೆಯಿಡಹತ್ತುತ್ತದೆ. ಈಗ ಜ್ಞಾನಭಿಕ್ಷುವಿಗೆ ಇಪ್ಪತ್ತೊಂದು ವರುಷ. ಅವನು ಧನ ಮಾನಗಳಲ್ಲೊಂದನ್ನೂ ತನ್ನ ಜನ್ಮದ ಧ್ಯೇಯವಾಗೆಣಿಸದೆ, ಬದುಕಿರುವವನಿಗೆ ಏನು ಬಿಟ್ಟರೂ ಧರ್ಮವು ನಮ್ಮ ಬೆನ್ನು ಬಿಡದಾದ್ದರಿಂದ ಅದರ ಮೂಲ ಕೇಂದ್ರನಾದ ಪರಮಾತ್ಮನನ್ನು ಪಡಕೊಳ್ಳದೆ ಗತಿಯಿಲ್ಲವೆಂದು ನಿರ್ಧರಿಸಿಕೊಂಡು ಭಗವದನುಸಂಧಾನಕ್ಕೆ ಕೃತಸಂಕಲ್ಪನಾದನು.



# ೪. ಘೋರ ಸಾಹಸ.

ಜ್ಞಾನಭಿಕ್ಷುವು ಅಧೀರಸಾಧಕನೆಂದು ಮೊದಲೇ ಹೇಳಿದ್ದೇನೆ. ಇಂಥವರಲ್ಲಿ ಯಾವಕಾರ್ಯಕ್ಕೂ ನಿರೀಕ್ಷೆಯಿಲ್ಲದೆ ಆತುರತೆಯೇ ಹೆಚ್ಚು. ಈ ಬಗೆಯ ಜನರ ಮೆದುಳಿನಲ್ಲಿ, ಬಂದ ಪ್ರವೃತ್ತಿಗಳನ್ನು ತಡೆಯುವ ಶಕ್ತಿಯೇ ಇರುವದಿಲ್ಲ. ಪ್ರವೃತ್ತಿಬಾರದೆ ಎಷ್ಟು ತಡೆಯಿತೋ ಅಷ್ಟು ತಡೆಯಿತು; ಆದರೆ ಒಮ್ಮೆ ಪ್ರವೃತ್ತಿಚಕ್ರಕ್ಕೆ ಚಾಲನೆ ಸಿಕ್ಕಿರೆ ಮುಗಿಯಿತು, ಏನಾದರೊಂದು ಕೊನೆಗಂಡೇ ತೀರಬೇಕು. ಹರಿದರೂ ಅಷ್ಟೇ, ಹತ್ತಿದರೂ ಅಷ್ಟೇ. ಆಯಿತು-ಈತನೊಮ್ಮೆ ಕೃತಸಂಕಲ್ಪನಾಗುವದೇ ತಡ, ಮನಸಿನ ಎಂಜಿನಿನ ಸ್ಟೀಮು ಮಿತಿಮೀರಿತು. ಹಗಲಿರುಳು ಒಂದೇಸವನೆ ದೇವನನ್ನು ನೆನೆನೆನೆಸಿ ಅಳಹತ್ತಿದನು. "ತಂದೇ ಕಣ್ಣುತೆರೆ! ನಿನ್ನ ನೆಲೆಹತ್ತದೆ ಬದುಕಲಿಕ್ಕೇ ಸಾಧ್ಯವಿಲ್ಲ! ಪುರಾತನ ಭಕ್ತರು ನಿನ್ನ ನಿಜಕರುಣದ ಸಾಕ್ಷಿಹೇಳುವರಲ್ಲಾ! ನಿನ್ನ ಕರುಣಾಕರತ್ವದ ಪ್ರತೀತಿಯನ್ನು ನನಗೆ ತೋರಿಸದಿರಬೇಡ! ಪ್ರತ್ಯಕ್ಷವಾಗದಿರಲಿಕ್ಕೆ ನೀನು ನನಗೆ ಯಾವ ಕಾರಣವನ್ನು ಹೇಳುವಿ? ನನ್ನ ಬಹುಜನ್ಮದ ಪಾಪವೇ? ಅಥವಾ ಇನ್ನೂ ನನಗೆ ಭಕ್ತಿಯೇ ಬಂದಿಲ್ಲವೇ? ತಂದೇ ನಾನಿದಾವದನ್ನೂ ಕೇಳಲಾರೆ. ನನ್ನ ಪಾಪಗಳಿಗೆ ನಾನೇನು ಹೊಣೆಗಾರ? ಒಳಸೂತ್ರಧಾರ ನೀನಿದ್ದು, ನಿಮಿತ್ತವನ್ನು ನನ್ನ ಪಾಲಿಗಿಟ್ಟರೆ ಯಾರು ಕೇಳಿಯಾರು! ನನ್ನ ಪಾಪವನ್ನು ನಾನು ಸ್ವೀಕರಿಸಲಾರೆ. 'ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ - ನೀನು ಕುಣಿಸಿದಂತೆ ಕುಣಿಯುವ ಗೊಂಬೆ ನಾನು! ನೀನಿದ್ದದ್ದೇ ನಿಜವಿದ್ದರೆ, ನಮ್ಮ ಸೂತ್ರಧಾರನು ನೀನಲ್ಲದೆ ಇನ್ನಾರೂ ಅಲ್ಲ. ಭಕ್ತಿಯೆನ್ನುವಿಯಾ? ಭಕ್ತಿಯಿಲ್ಲವೆಂದರೆ ಅದನ್ನೂ ನಾನು ಕೇಳಲಾರೆ! ಭಕ್ತಿಯೆಂದರೇನು, ನೀನೇ ಹೇಳು!! ಒಳಗಿನ ಕರುಳೆಲ್ಲಾ

ನಿನಗಾಗಿ ಕತ್ತರಿಸಹತ್ತಿದರೆ, ಅದೇ ಭಕ್ತಿಯಲ್ಲವೇ? ನಿನ್ನ ಅರ್ಥ ಇದಕ್ಕಿಂದ ಹೆಚ್ಚಿಗೇನಾದರೂ ಇದ್ದರೆ ಹೇಳು! ಕಠೋರ ಸಾಧನಗಳಿಂದು ಏನೇನೋ ಇವೆಯಲ್ಲಾ - ಅವುಗಳ ಹೊರತು ನೀನು ಸಾಧ್ಯನಲ್ಲವೇನು? ಯಾಕೆ? ನೀನು ಕರುಣಾಸಾಗರನೂ, ಲೋಕಪಿತನೂ ಆಗಿರುವಾಗ ನಿನಗೆ ಹೃದಯದ ಕೂಗು ಸಾಕಾಗದೇನು? ಮೇಲೆ ಕೃತ್ರಿಮ ಸಾಧನಗಳ ಅಗತ್ಯವೇ!? ನಾನಿದನ್ನು ಒಪ್ಪಲಾರೆ! ಮಗುವಾಗಿ ಕೂಗುವೆ, ತಾಯಾಗಿ ಕಾಯಬಾ!! ''

ಹೀಗೆಂದು ಪರಿಪರಿಯಿಂದ ಗೋಳಿಡಹತ್ತಿದನು. ಕೃತಸಂಕಲ್ಪನಾಗಿ ಇನ್ನೂ ಒಂದು ಒಂದೂವರೆ ತಿಂಗಳು ಮಾತ್ರ. ಇಷ್ಟರಲ್ಲೇ ಇಲ್ಲಿಗೆ ಬಂದುಬಿಟ್ಟಿತು. ಮೊರೆಯಿಟ್ಟು ಮೊರೆಯಿಟ್ಟು ಸಾಕಾಗಿ ಕೊನೆಗೆ ನಿರ್ಧರಿಸಿದ್ದೇನೆಂದರೆ - ಅವನ ಒಲುಮೆಯಾಗದಿರುವದಕ್ಕೆ ಅವನ ಬಿಟ್ಟು ಅನ್ಯ ಆಶೆ ನನ್ನಲ್ಲೇನಾದರೂ ಇದೆಯೇ? ಇಲ್ಲ - ಇಲ್ಲ! ಆದರೆ ಏಕೆ ಆತನಿನ್ನೂ ಕೈಗೊಡಲೊಲ್ಲನು? ಆವ ಆಶೆಯಿಲ್ಲವೆಂದರೂ ಪ್ರಾಣಿಮಾತ್ರಕ್ಕೆಲ್ಲ ಬದುಕಿರುವ ಆಶೆ ತಪ್ಪಿದ್ದಲ್ಲ. ಅದೊಂದೇ ಆಶೆಯು ನನಗೆ ಅಡ್ಡ ಬರುತ್ತಿದ್ದರೆ ಅದೂ ಒಂದು ತೀರಿಹೋಗಲೆಂದು ಆತ್ಮಹತ್ಯಕ್ಕೆ ಸನ್ನದ್ಧನಾದನು!!! ಅಂದಿನಿರುಳೇ ಉರುಲು ಹಾಕಿಕೊಳ್ಳುವದನ್ನು ಗೊತ್ತುಪಡಿಸಿಕೊಂಡನು. ಮನದಲ್ಲಿ ಕುದಿಯಿಲ್ಲ, ಒಂದು ಬಗೆಯ ಕೃತಾರ್ಥನಾಗುವ ಹರ್ಷವೇ ಒಳಗೆ ತುಂಬಿಕೊಂಡಿದೆ. "ಏನಾದರೂ ಸೈ! ನನ್ನ ಮಟ್ಟಿಗೆ ಇದು ಕರ್ತವ್ಯವಾಗಿದೆ! ನನ್ನಿಂದಾಗಬೇಕಾದದ್ದು ಏನೇನಿದೆಯೋ ಅದೆಲ್ಲಾ ನೆರವೇರಲಿ; ಅವನಿಂದಾಗ ಬೇಕಾದದ್ದೇನಿದೆಯೋ ಅದರ ಹೊರೆಯೆಲ್ಲಾ ಅವನ ಮೇಲುಳಿಯಲಿ. ನನ್ನಿಂದಲೇ ನಿಂತಿತೆನ್ನುವದು ಬೇಡ. ಪ್ರಾಣದಾಸೆಯೊಂದನ್ನು ಅರ್ಪಿಸಿಬಿಟ್ಟರೆ ನನ್ನದೆಲ್ಲಾ ತೀರಿತು. ಇಷ್ಟಾಗಿಯೂ ಆತನು ಕೈಗೊಡದಿದ್ದರೆ ಅದರ ಶಬ್ದ ಅವನ ಮೇಲುಳಿಯಿತು!'' ಹೀಗೆಂದು ಗಟ್ಟಿಯಾಗಿ ಭಾವಿಸಿಕೊಂಡನು.

# ೪. ಘೋರ ಸಾಹಸ.

ಜ್ಞಾನಭಿಕ್ಷುವು ಅಧೀರಸಾಧಕನೆಂದು ಮೊದಲೇ ಹೇಳಿದ್ದೇನೆ. ಇಂಥವರಲ್ಲಿ ಯಾವಕಾರ್ಯಕ್ಕೂ ನಿರೀಕ್ಷೆಯಿಲ್ಲದೆ ಆತುರತೆಯೇ ಹೆಚ್ಚು. ಈ ಬಗೆಯ ಜನರ ಮೆದುಳಿನಲ್ಲಿ, ಬಂದ ಪ್ರವೃತ್ತಿಗಳನ್ನು ತಡೆಯುವ ಶಕ್ತಿಯೇ ಇರುವದಿಲ್ಲ. ಪ್ರವೃತ್ತಿಬಾರದೆ ಎಷ್ಟು ತಡೆಯಿತೋ ಅಷ್ಟು ತಡೆಯಿತು; ಆದರೆ ಒಮ್ಮೆ ಪ್ರವೃತ್ತಿಚಕ್ರಕ್ಕೆ ಚಾಲನೆ ಸಿಕ್ಕರೆ ಮುಗಿಯಿತು, ಏನಾದರೊಂದು ಕೊನೆಗಂಡೇ ತೀರಬೇಕು. ಹರಿದರೂ ಅಷ್ಟೇ, ಹತ್ತಿದರೂ ಅಷ್ಟೇ. ಆಯಿತು-ಈತನೊಮ್ಮೆ ಕೃತಸಂಕಲ್ಪನಾಗುವದೇ ತಡ, ಮನಸಿನ ಎಂಜಿನಿನ ಸ್ಟೀಮು ಮಿತಿಮೀರಿತು. ಹಗಲಿರುಳು ಒಂದೇಸವನೆ ದೇವನನ್ನು ನೆನೆನೆನಿಸಿ ಅಳಹತ್ತಿದನು. “ತಂದೇ ಕಣ್ಣುತೆರೆ! ನಿನ್ನ ನೆಲೆಹತ್ತದೆ ಬದುಕಲಿಕ್ಕೇ ಸಾಧ್ಯವಿಲ್ಲ! ಪುರಾತನ ಭಕ್ತರು ನಿನ್ನ ನಿಜಕರುಣದ ಸಾಕ್ಷಿಹೇಳುವರಲ್ಲಾ! ನಿನ್ನ ಕರುಣಾಕರತ್ವದ ಪ್ರತೀತಿಯನ್ನು ನನಗೆ ತೋರಿಸದಿರಬೇಡ! ಪ್ರತ್ಯಕ್ಷವಾಗದಿರಲಿಕ್ಕೆ ನೀನು ನನಗೆ ಯಾವ ಕಾರಣವನ್ನು ಹೇಳುವಿ? ನನ್ನ ಬಹುಜನ್ಮದ ಪಾಪವೇ? ಅಥವಾ ಇನ್ನೂ ನನಗೆ ಭಕ್ತಿಯೇ ಬಂದಿಲ್ಲವೇ? ತಂದೇ ನಾನಿದಾವದನ್ನೂ ಕೇಳಲಾರೆ. ನನ್ನ ಪಾಪಗಳಿಗೆ ನಾನೇನು ಹೊಣೆಗಾರ? ಜಗಸೂತ್ರಧಾರ ನೀನಿದ್ದು, ನಿಮಿತ್ತವನ್ನು ನನ್ನ ಪಾಲಿಗಿಟ್ಟರೆ ಯಾರು ಕೇಳಿಯಾರು! ನನ್ನ ಪಾಪವನ್ನು ನಾನು ಸ್ವೀಕರಿಸಲಾರೆ. ‘ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ - ನೀನು ಕುಣಿಸಿದಂತೆ ಕುಣಿಯುವ ಗೊಂಬೆ ನಾನು! ನೀನಿದ್ದದ್ದೇ ನಿಜವಿದ್ದರೆ, ನಮ್ಮ ಸೂತ್ರಧಾರನು ನೀನಲ್ಲದೆ ಇನ್ನಾರೂ ಅಲ್ಲ ಭಕ್ತಿಯೆನ್ನುವಿಯಾ? ಭಕ್ತಿಯಿಲ್ಲವೆಂದರೆ ಅದನ್ನೂ ನಾನು ಕೇಳಲಾರೆ! ಭಕ್ತಿಯೆಂದರೇನು, ನೀನೇ ಹೇಳು!! ಒಳಗಿನ ಕರುಳಿಲ್ಲಾ

ನಿನಗಾಗಿ ಕತ್ತರಿಸಹತ್ತಿದರೆ, ಅದೇ ಭಕ್ತಿಯಲ್ಲವೇ? ನಿನ್ನ ಅರ್ಥ ಇದ ಕ್ಕಿಂದ ಹೆಚ್ಚಿಗೇನಾದರೂ ಇದ್ದರೆ ಹೇಳು! ಕಠೋರ ಸಾಧನಗಳಿಂದು ಏನೇನೋ ಇವೆಯಲ್ಲಾ – ಅವುಗಳ ಹೊರತು ನೀನು ಸಾಧ್ಯನಲ್ಲ ವೇನು? ಯಾಕೆ? ನೀನು ಕರುಣಾಸಾಗರನೂ, ಲೋಕಪಿತನೂ ಆಗಿರು ವಾಗ ನಿನಗೆ ಹೃದಯದ ಕೂಗು ಸಾಕಾಗದೇನು? ಮೇಲೆ ಕೃತ್ರಿಮ ಸಾಧನಗಳ ಅಗತ್ಯವೇ!? ನಾನಿದನ್ನು ಒಪ್ಪಲಾರೆ! ಮಗುವಾಗಿ ಕೂಗುವೆ, ತಾಯಾಗಿ ಕಾಯಬಾ!!"

ಹೀಗೆಂದು ಪರಿಪರಿಯಿಂದ ಗೋಳಿಡಹತ್ತಿದನು. ಕೃತಸಂಕಲ್ಪ ನಾಗಿ ಇನ್ನೂ ಒಂದು ಒಂದೂವರೆ ತಿಂಗಳು ಮಾತ್ರ. ಇಷ್ಟರಲ್ಲೇ ಇಲ್ಲಿಗೆ ಬಂದುಬಿಟ್ಟಿತು. ಮೊರೆಯಿಟ್ಟು ಮೊರೆಯಿಟ್ಟು ಸಾಕಾಗಿ ಕೊನೆಗೆ ನಿರ್ಧರಿಸಿದ್ದೇನೆಂದರೆ – ಅವನ ಒಲುಮೆಯಾಗದಿರುವದಕ್ಕೆ ಅವನ ಬಿಟ್ಟು ಅನ್ಯ ಆಶೆ ನನ್ನಲ್ಲೇನಾದರೂ ಇದೆಯೇ? ಇಲ್ಲ – ಇಲ್ಲ! ಆದರೆ ಏಕೆ ಆತನಿನ್ನೂ ಕೈಗೊಡಲೊಲ್ಲನು? ಆವ ಆಶೆಯಿಲ್ಲವೆಂದರೂ ಪ್ರಾಣಿಮಾತ್ರಕ್ಕೆಲ್ಲ ಬದುಕಿರುವ ಆಶೆ ತಪ್ಪಿದ್ದಲ್ಲ. ಅದೊಂದೇ ಆಶೆಯು ನನಗೆ ಅಡ್ಡ ಬರುತ್ತಿದ್ದರೆ ಅದೂ ಒಂದು ತೀರಿಹೋಗಲೆಂದು ಆತ್ಮ ಹತ್ಯಕ್ಕೆ ಸನ್ನದ್ಧನಾದನು!!! ಅಂದಿನಿರುಳೇ ಉರುಲು ಹಾಕಿಕೊಳ್ಳು ವದನ್ನು ಗೊತ್ತುಪಡಿಸಿಕೊಂಡನು. ಮನದಲ್ಲಿ ಕುದಿಯಿಲ್ಲ, ಒಂದು ಬಗೆಯ ಕೃತಾರ್ಥನಾಗುವ ಹರ್ಷವೇ ಒಳಗೆ ತುಂಬಿಕೊಂಡಿದೆ. "ಏನಾದರೂ ಸೈ! ನನ್ನ ಮಟ್ಟಿಗೆ ಇದು ಕರ್ತವ್ಯವಾಗಿದೆ! ನನ್ನಿಂ ದಾಗಬೇಕಾದದ್ದು ಏನೇನಿದೆಯೋ ಅದೆಲ್ಲಾ ನೆರವೇರಲಿ; ಅವನಿಂದಾಗ ಬೇಕಾದದ್ದೇನಿದೆಯೋ ಅದರ ಹೊರೆಯೆಲ್ಲಾ ಅವನ ಮೇಲುಳಿಯಲಿ. ನನ್ನಿಂದಲೇ ನಿಂತಿತೆನ್ನುವದು ಬೇಡ. ಪ್ರಾಣದಾನವೊಂದನ್ನು ಅರ್ಪಿಸಿಬಿಟ್ಟರೆ ನನ್ನದೆಲ್ಲಾ ತೀರಿತು. ಇಷ್ಟಾಗಿಯೂ ಆತನು ಕೈಗೊ ಡದಿದ್ದರೆ ಅದರ ಶಬ್ದ ಅವನ ಮೇಲುಳಿಯಿತು!" ಹೀಗೆಂದು ಗಟ್ಟಿ ಯಾಗಿ ಭಾವಿಸಿಕೊಂಡನು.

ಇಲ್ಲಿ ಒಂದು ಮಾತೇನೆಂದರೆ– ಉದ್ರೇಕಪರವ್ಯಕ್ತಿಗಳ ಸಿಥಾರ್ರದ ಕೊಟ್ಟಕೊನೆಯು ಬಹಳ ವಿಚಿತ್ರರೀತಿಯಿಂದ ಮುಗಿಯುತ್ತಿರುತ್ತದೆ. ಒಟ್ಟಿಗೆ ಅವರಲ್ಲಿ ಎಲ್ಲಾ ವೃತ್ತಿಗಳೇ ಹೆಚ್ಚು. ಒಂದು ರೀತಿಯಿಂದ ಇವರು ವೃತ್ತಿವಶರೇ ಹೌದು. ಕರುಣ ಒಂದು ಕರುಳು ಕರಗಿದಾಗ ಇವರು ಕರ್ಣಸಿಗಿಂತ ಹೆಚ್ಚಿನ ವಾಗ್ದಾನಮಾಡುವರು. ಆಗ ಇವರಿಗೆ ಯಾವಾವ ಅನನುಕೂಲತೆಗಳೂ ಕಾಣಿಸುವದಿಲ್ಲ. ಏನಾದರೂ ಒಂದೆರಡು ಅಂಥ ಅಡ್ಡಿಗಳು ಹೊಳೆದರೆ,– “ಓ! ಇವೆಷ್ಟರವು? ಏನಾದರೂ ಮಾಡಲಿಕ್ಕೆ ಒಂದೀತು!” ಎಂದು ಧೈರ್ಯ ಹೇಳಿಕೊಳ್ಳುವರು. ಅಂತೂ ವೃತ್ತಿಯು ಉದ್ರೇಕವಿರುವಾಗ ಆವೇಶದಿಂದ ಭಾಷೆ ಕೊಟ್ಟುಬಿಡುವರು. ಒಳಿಕ ಆವೇಶವು ಇಳಿದಂತೆಲ್ಲ ಬಗೆಬಗೆಯ ಅನನುಕೂಲತೆಗಳೂ, ಸಂಶಯಗಳೂ ಮೈದೋರಹತ್ತುವವು. ಆದರೂ ಇಂಥವರು ಒಮ್ಮೆ ಧ್ಯೇಯವಾದಿಗಳಾಗಿ ಬಿಟ್ಟರೆಂದರೆ, ಅಂಥ ಪ್ರಸಂಗದಲ್ಲಿಯೂ ಏನಾದರೊಂದು ಸಮಾಧಾನ ಹೇಳಿಕೊಳ್ಳುತ್ತ ಕಲ್ಪನೆಗಳನ್ನು ಹಿಂದಟ್ಟುತ್ತಿರುತ್ತಾರೆ. ಮಳೆಗಾಲದ ಮುಗಿಲಿನಂತೆ ಒಮ್ಮೆ ಕಾರ್ಮುಗಿಲು, ಒಮ್ಮೆ ಕಡುಬಿಸಿಲು ಹೀಗೆ ಆದರುತ್ತ – ಚೆದರುತ್ತ ಕಾರ್ಯ ನೆರವೇರಬೇಕಾದ ಕೊನೆಯ ಗಳಿಗೆಯ ವರೆಗೂ ಸಾಗಿ ಬರುವದು. ಕೊನೆಗೆ ಪ್ರತ್ಯಕ್ಷಪ್ರಸಂಗವೇ ಒದಗಕೂಡಲೆ, ಇವರ ಹೃದಯದಲ್ಲಿ ತತ್ಸಮಯಾನುಸಾರವಾದ ವಿಪರೀತವೃತ್ತಿಗಳ ಕಂಪನವು ಉಕ್ಕೇರಿ ಬರುವದರಿಂದ ಕಾರ್ಯಪರಾಙ್ಮುಖರಾಗಿ ಬಿಡುವರು. ನಾಟಕದೊಳಗಿನ ಪ್ರೇಕ್ಷಕರಲ್ಲಿ ಗಳಿಗೆಗೊಂದು ದೃಶ್ಯ ಬದಲಾದರೆ, ಗಳಿಗೆಗೊಂದು ರಸಭಾವವೇಳುತ್ತಿರುವಂತೆ ಇಂಥ ಉದ್ರೇಕಪರಜೀವಿಗಳ ಚಿತ್ತಕ್ಷೇತ್ರದಲ್ಲಿಯೂ ಪ್ರಸಂಗಬಂದಂತೆ ಪ್ರಗಾಢ ಪರಿವರ್ತನಗಳು ಕಂಡುಬರುವವು.

ಈಗ ನಮ್ಮ ಕಥಾನಾಯಕನಿಗೂ ತನ್ನ ಗೊತ್ತುಪಡಿಸಿದ ಕೊನೆಯ ಗಳಿಗೆಯು ಏಳೆಂದು ಎಬ್ಬಿಸಿದೊಡನೆ ಬಗೆಬಗೆಯ ಕಲ್ಪನೆ

ಗಳು ಕಣ್ಣಮುಂದೆ ಕಟ್ಟಿದವು. “ಆತನಿಗಾಗಿ ಆತ್ಮಹತ್ಯ ಮಾಡಿಕೊಳ್ಳಲಿಕ್ಕೆ ನಿಂತವರೆಲ್ಲರಿಗೂ ಆತನ ಸಾಕ್ಷಾತ್ಕಾರವಾಗುವದು ನಿಯಮವೆಂದು ಹೇಳಲಿಕ್ಕೆ ಬರುವಂತಿಲ್ಲ. ಸಾಯುತ್ತೇನೆ ನೋಡೆಂದು ಅವನಿಗೆ ಉಲಿದರೆ ಅವನೇನೋ ಅದಕ್ಕೆ ಅಷ್ಟೊಂದು ಮಹತ್ತ್ವವನ್ನು ಕೊಟ್ಟಾನೆಂದು ಹೇಳಲಿಕ್ಕೆ ಬರುವದಿಲ್ಲ. ಯಾಕೆಂದರೆ ಹುಟ್ಟುವದೂ, ಸಾಯುವದೂ ನಮಗೆ ಬಹಳ ದೊಡ್ಡ ಮಾತಾಗಿರಬಹುದಾದರೂ ಅವನಿಗೇನೂ ಹಾಗಿರಲಾರದು. ಅವನ ಸೃಷ್ಟಿಯಲ್ಲಿ ಸಾಯುವ ಪ್ರಾಣಿಗಳ ಸಂಖ್ಯೆ ಕ್ಷಣಕ್ಕೊಂದು ಅಸಂಖ್ಯಪರಾರ್ಧದಷ್ಟಿರಬಹುದು. ಹೀಗೆಂದ ಮೇಲೆ ಅವನಿಗೆ ಈತನ ಆತ್ಮಹತ್ಯದ ಬೆಲೆಯೆಷ್ಟಿದ್ದೀತು! ಕ್ಷಣಕ್ಷಣಕ್ಕೆ ಅಸುವನ್ನು ನೀಗುತ್ತಿರುವ ಅಸಂಖ್ಯ ಜೀವಿಗಳಲ್ಲಿ ಇವನದೂ ಒಂದುಜೀವ! ಅಲ್ಲದೆ ಈ ಮಾರ್ಗದಲ್ಲಿ ಗೆದ್ದವರ ಉದಾಹರಣೆಗಳಿರುವಂತೆ, ಬರಿಸತ್ತುಹೋದವರಿಗೂ ಕೊರತೆಯಿಲ್ಲ....” ರಾಮಕೃಷ್ಣಪರಮಹಂಸರೂ, ಸಾಧು ಸುಂದರಸಿಂಗರೂ ಆಧುನಿಕರಲ್ಲಿ ಈ ಹಾದಿಯಿಂದ ಗೆದ್ದವರು. ಅವರಿಗೆ, ಆತ್ಮಹತ್ಯಕ್ಕೆ ನಿಂತಾಗಲೇ ಸಾಕ್ಷಾತ್ಕಾರವಾಯಿತು. ಆದರೆ ಜ್ಞಾನಭಿಕ್ಷುವಿಗೆ ಬೇರೆ ಎರಡು ಮೂರು ಉದಾಹರಣೆಗಳು ನಡೆದದ್ದು ಗೊತ್ತಿದ್ದಿತು. ತನ್ನೂರ ಸುತ್ತುಮುತ್ತಲೇ ನಡೆದ ಮಾತು. ಏನೇನೋ ಪುಸ್ತಕಗಳನ್ನೋದಿದವನೊಬ್ಬನು ಕೊನೆಗೊಂದು ಶಿವರಾತ್ರಿಯ ದಿನ-ಇಂದು ದೇವನ ನೆಲೆ ಹತ್ತಬೇಕು, ಇಲ್ಲದಿದ್ದರೆ ಪ್ರಾಣ ಹೋಗಬೇಕು-ಹೀಗೆಂದು ನಿಶ್ಚಯಿಸಿ ವಿಷವನ್ನು ಕುಡಿದು ಬಿಟ್ಟನು. ಸತ್ತುಹೋದದ್ದೇ ನಿಜವಾಯಿತು! ಇನ್ನೊಂದೂರಲ್ಲಿ ಒಬ್ಬ ಸಾಧುವಿನ ಹತ್ತರ ಶಿಷ್ಯಳಾಗಿ ಹೋದ ಹೆಂಗುಸೊಬ್ಬಳು ಆತನಲ್ಲಿ ನೆಲೆ ಹತ್ತದೆ ದೇವನ ಬಳಿಯಲ್ಲಿ ಮೊರೆಯಿಟ್ಟು ಉರುಲು ಹಾಕಿಕೊಂಡಳು. ಅವಳೂ ಅತ್ತಲೇ ಸಾಗಿದಳು!! ಜಪಾನದಲ್ಲೊಬ್ಬನು ಧರ್ಮಜೀವನದಲ್ಲಿ ನೆಲೆಗಾಣದ್ದರಿಂದ ದಬದಬೆಯ ಮೇಲಿಂದ ಜಿಗಿದು ಪ್ರಾಣ ಕೊಟ್ಟ ವೃತ್ತಾಂತವನ್ನು ಒಂದು ಪುಸ್ತಕದಲ್ಲಿ ಬರೆದಿತ್ತು. ಇಂಥವು

ಗಳೆಲ್ಲಾ ಈ ಗಳಿಗೆಯಲ್ಲಿ ಜ್ಞಾನಭಿಕ್ಷುವಿನ ಸ್ಮೃತಿಪಟಲದ ಮೇಲೆ ಮೂಡಿ, ಈತನನ್ನು ಬೆದರಿಸಿ ಹಿಂಡೆಳೆಯಹತ್ತಿದವು. ಆಗಲೂ ಈತನು ತನ್ನ ಈ ವಿಪರೀತವೃತ್ತಿಗೆ ವಿರೋಧವಾಗಿ ಎಷ್ಟೆಷ್ಟೋ ವಿವೇಚಿಸಿ ನೋಡಿದನು. ಕೊನೆಗೆ “ಸತ್ತಷ್ಟೇ ನಿಜವಾಗಿ ಬಿಟ್ಟರೆ ಎಲ್ಲಾ ಅಲ್ಲೇ ಕೂಡುವದಲ್ಲಾ! ಇದಲ್ಲದೆ ಈ ಹಾದಿಯಲ್ಲಿ ನಾನು ಸತ್ತರೆ ನನ್ನ ಕಥೆಯನ್ನರಿತವರಾರೂ ಈ ಹಾದಿಗೆ ಹೋಗದ ನಾಸ್ತಿಕರಾಗುವರಲ್ಲಾ! ಆದ್ದರಿಂದ ಜೀವಧಾರಣಮಾಡಿಕೊಂಡೇ ಏನಾದರೂ ಬೇರೆ ಹಂಚಿಕೆಯಿಂದ ಹಾದಿಯನ್ನು ಹುಡುಕಿಕೊಳ್ಳೋಣ” ಎಂದು ನಿಶ್ಚಯಿಸಿದನು.



# ೫. ಕಲ್ಪನಾತೀತ.

ಇಷ್ಟರಲ್ಲಿ ಶ್ರೀ ಅರವಿಂದಯೋಗಿಗಳ ವಿಷಯಕ್ಕೆ ಎಷ್ಟೋ ಮಾತುಗಳು ಗೊತ್ತಾಗಿದ್ದುವು. ನಾಳಿನ ಜಗತ್ತಿನ ಉನ್ನತಿಯು ಅವರನ್ನು ಕಾದುಕೊಂಡು ಕುಳಿತಿದೆಯೆಂಬುದನ್ನೂ, ಅವರು ಸಾಕ್ಷಾತ್ಕಾರೀ ಪುರುಷರಿರುವರೆಂಬುದನ್ನೂ, ತಮ್ಮ ಕಾಲಬರುವ ವರೆಗೆ ಭಗವದಾಜ್ಞೆಯಿಂದಲೇ ಏಕಾಂತವಾಸಿಗಳಾಗಿರುವರೆಂಬುದನ್ನೂ ಈತನು ಅರಿತಿದ್ದನು. ವಿದ್ಯಮಾನಕಾಲದಲ್ಲಿ ಇಡೀ ಭೂಮಂಡಲದಲ್ಲಿ ಇವರೊಬ್ಬರೇ ಏಕಮಾತ್ರ ಪರಮಸಿದ್ಧರೆಂಬುದೂ ಈತನಿಗೆ ಗೊತ್ತಾಗಿತ್ತು. ಈಗ ಅವರ ಪೂರ್ಣಯೋಗದ ಗ್ರಂಥಗಳ ವಿಚಾರಗಳನ್ನು ಮನನ ಮಾಡಹತ್ತಿದನು. **ಈ ಗ್ರಂಥಗಳ ಅಧಿಕಾರಯುಕ್ತ ಜ್ವಲಂತ ಮಂತ್ರಮಯ ವಾಕ್ಯಗಳಲ್ಲಿರುವಷ್ಟು ತೇಜವನ್ನು ಆಧುನಿಕ ಜಗತ್ತಿನ ಇನ್ನಾವ ಇತರ ಗ್ರಂಥಗಳಲ್ಲಿಯೂ ಕಾಣುವದು ದುರ್ಲಭವಾಗಿದೆ.**

ಆದರೆ ಅರವಿಂದಯೋಗಿಗಳ ಗ್ರಂಥಗಳನ್ನು ಅತ್ಯಂತ ಆಸ್ಥೆಯಿಂದ ಓದುತ್ತ, ಮನನಮಾಡುತ್ತ, ಕೆಲದಿನಗಳು ಹಿಗ್ಗಿನಲ್ಲಿ ಕಳೆದವೆನ್ನುವಷ್ಟರಲ್ಲಿ ಮತ್ತೊಂದು ಮಹಾಪೂರವು ಬಂತು. ಆ ಗ್ರಂಥಗಳಲ್ಲಿ ಎರಡು ಸಿಡಿಗುಂಡಿನಂಥ ವಾಕ್ಯಗಳು ಲಕ್ಷ್ಯಕ್ಕೆ ಬಂದುವು. "ದೇವರೆಂದರೆ ಏನೆಂಬುದರ ವಿವೇಚನೆ ಬೇಕಾಗಿಲ್ಲ. **ಏನಾದರೂ ಇಟ್ಟುಕೊಳ್ಳಿರಿ.**" "ಕೋಟಿ ಜನ್ಮಗಳ ವರೆಗೆ ಹಾ ಭಗವಾನ್, ಹಾ ಭಗವಾನ್ ಎಂದು ತಲೆತಲೆಗಟ್ಟಿಸಿಕೊಂಡರೂ **ಆತನು ಕಾಣಲಾರನು.**" ಈ ಮಾತುಗಳನ್ನೋದಿದ ಕೂಡಲೆ ಜ್ಞಾನಭಿಕ್ಷುವಿನ ಹೃದಯಕ್ಕೆ ಸಿಡಿಲು ಬಡಿದಂತಾಯ್ತು!

" ಆಹಾ !!! ಜಗದ್ವಿಖ್ಯಾತರಾದ ಸಿದ್ಧಯೋಗೀಶ್ವರರೆಂದು ಯಾರನ್ನು ತಿಳಿದುಕೊಂಡಿರುವೆವೋ ಅಂಥವರೇ ಕುರಿತು ಹೀಗೆ ಹೇಳಿದ ಬಳಿಕ ಇನ್ನೇನುಗತಿ !! ಭಗವದಾಜ್ಞೆಯಿಂದ ಆಡುವವರು ಮಾಡುವರೇ ಹೀಗೆ ಹೇಳುವವರಾದರೆ ಇನ್ನೆಲ್ಲಿ ಮೊರೆಯಿಡಲಿ ! ಜೀವಿಸಿ ಇರುವ ಅರವಿಂದರಂಥವರ ವಿಷಯವೇ ಹೀಗಾದರೆ, ದಿವಂಗತರಾದ ವಿವೇಕಾನಂದರನ್ನೂ ಪರಮಹಂಸರನ್ನೂ ಆಶ್ರಯಿಸುವ ಬಗೆಹೇಗೆ?! ಅಯ್ಯೋ ಕಷ್ಟಕಷ್ಟ! ದುರ್ಗಂ ಪಥಸ್ತತ್ !! ಹೆಜ್ಜೆಹಾಕಲಸಾಧ್ಯ! ಕತ್ತಲೆ-ಕತ್ತಲೆ! ಅಡಿಯಿಡಲು ಇಂಬಿಲ್ಲವಲ್ಲಾ !! " ಕೋಟಿಕೋಟಿ ಜನ್ಮ !" "ತಲೆತಲೆ ಗಟ್ಟಿಸಿಕೊಂಡರೂ" !! ಅಹಾ-ಅಯ್ಯೋ ಅಕಟಕಟಾ! ಇನ್ನೇನಿದೆ??? " ಏನಾದರೂ ಇಟ್ಟುಕೊಳ್ಳಿರಿ "! ಅಮ್ಮಮ್ಮಾ ! ತಲೆ ಸಿಡಿದು ಹೋಗುತ್ತಿದೆಯಲ್ಲಾ !! ಅಯ್ಯೋ ನನ್ನ ದಗ್ಧ ಮಸ್ತಕವನ್ನು ಎಲ್ಲಿರಿಸಲಿ !! ಅಹಾ! ಯೋಗೀಶ್ವರ ಅರವಿಂದರು !! ಜಗದ ಆಶೆಯ ಆಧಾರಸ್ತಂಭರಾದ ಅರವಿಂದರು !!! ಇಂಥವರ ವಾಣಿ- " ಕೋಟಿಕೋಟಿ ಜನ್ಮ ತಲೆಗಟ್ಟಿಸಿಕೊಂಡರೂ ಕಾಣೆನು ! " ಜಗದಲ್ಲಿ ಇನ್ನಾರ ಆಶ್ರಯವನ್ನರಸಲಿ ! ಕಠಿನ-ಕಠಿನ ! ಏನೂ ತಿಳಿಯದಾಯಿತಯ್ಯೋ !!! "

ಹೀಗೆಂದು ನಮ್ಮ ನಾಯಕನು ದಿಗ್ಭ್ರಾಂತನಾಗಿರುವ ಹೊತ್ತಿಗೆ ಸರಿಯಾಗಿ ಕೈಗೆ ಸಿಕ್ಕ ಬಾಯ್ಬಲ್‌ಗ್ರಂಥವನ್ನು ತೆರೆದು ನೋಡುವಷ್ಟರಲ್ಲಿ ಮೊಟ್ಟ ಮೊದಲಿಗೆ ಕಣ್ಣಿಗೆ ಬಿದ್ದ ವಾಕ್ಯವನ್ನು ಇನ್ನೇನು ಹೇಳಲಿ ? ಅದು ಯೋಹಾನನ ಸುವಾರ್ತೆಯ ಮೊದಲನೇ ಅಧ್ಯಾಯದ ಹದಿನೆಂಟನೇ ವಚನವಾಗಿತ್ತು. " **ದೇವರನ್ನು ಎಂದೂ ಯಾರೂ ಕಂಡಿಲ್ಲ**!!! " ತೀರಿತು ! ನಮ್ಮ ಕಥಾನಾಯಕನ ಸ್ಥಿತಿಯನ್ನು ಬಣ್ಣಿಸಲು ನನ್ನ ಬಾಯಿಯೇಳದು !! ಅವನ ಆ ಮರ್ಮಾಂತಿಕವೇದನೆಯನ್ನು ನೋಡಲಾಸಲ್ಲ - ಆಡಲಾಸಲ್ಲ ! ಅವನಿಗೀಗ ಭೂಮಿಯು ಸ್ಥಳವನ್ನು ಕೊಡದಾಯಿತು ! " ನಾನು ನನ್ನ ತಂದೆಯನ್ನು ಅರಿತಿ

ದ್ದೇನೆ. ಇಲ್ಲವೆಂದರೆ ನಿಮ್ಮಂತೆ ನಾನೂ ಸುಳ್ಳುಗಾರನಾದೇನು'' ಎಂದು ಗರ್ಜಿಸುವ ಕ್ರಿಸ್ತನ ಶಾಸ್ತ್ರದಲ್ಲಿ ಇಂಥ ವಾಕ್ಯವೆಂದರೆ ಏನು ಗತಿ! '' **ಜಗತ್ತನ್ನೆಲ್ಲ ಆಳುವ ಮಹಾಶಕ್ತಿಗೆ ಕನಿಷ್ಠಪಕ್ಷಕ್ಕೆ ನಿನ್ನಷ್ಟಾದರೂ ಬುದ್ಧಿಯಿದೆಯೆಂಬುದನ್ನು ಮರೆಯದಿರು** '' ಎಂದು ಗದ್ದರಿಸುವ ಅರವಿಂದರಲ್ಲಿ ಅಂಥ ವಾಣಿ! ಅಹಾ! ಸಾಧಕಜೀವಿಗಳಿಗಲ್ಲದೆ ಉಳಿದವರಿಗೆ ಇಂಥ ವಿಷಮಸಂಕಟದಕಲ್ಪನೆಯಾಗುವದು ಸಾಧ್ಯವಿಲ್ಲ. ಪ್ರಾಚೀನಕಾಲದ ಒಬ್ಬ ಮಹಾಜ್ಞಾನಿಯೂ, ಅರ್ವಾಚೀನಕಾಲದ ಒಬ್ಬ ದಿವ್ಯಜ್ಞಾನಿಯೂ ಕೂಡಿಯೇ ಹೀಗೆ ಸರ್ವನಾಶಕರವಾದ ವಾಕ್ಯವನ್ನು ಹೇಳಿದರೆ ಮುಂದೆ ನೆಲೆಯೆಲ್ಲಿ? ಜ್ಞಾನಭಿಕ್ಷುವಿಗೆ ಅಂದು ಬಯಸಿದ ಆ ಸಾವು ಬೇಕಾಯಿತು,—ಇಂದಿನ ಈ ನೋವು ಸಾಕಾಯಿತು!!! ಬಾಯಲ್ಲಿ ಎಸರಿಲ್ಲದ-ಹೊಟ್ಟೆಯಲ್ಲಿ ಉಸುರಿಲ್ಲದ ನಮ್ಮ ನಾಯಕನಿಗೆ ಎಲ್ಲೆಲ್ಲಿಯೂ ಶೂನ್ಯವೇ ಶೂನ್ಯವಾಗಿ ಹೋಯಿತು!

ವಿಧಿಗೆ ಇಷ್ಟಕ್ಕೇ ತೃಪ್ತಿಯಾಗಲಿಲ್ಲ. ''ಯುಗಾಚಾರ್ಯ ವಿವೇಕಾನಂದ'' ಎಂಬ ಮತ್ತೊಂದು ಪುಸ್ತಕವನ್ನು ಅದು ಕೈಗಿಟ್ಟಿತು. ಅದರಲ್ಲಿ ಪರಮಹಂಸರು ದೇಹಬಿಡುವ ದಿವಸ—ಅವರಿಗೂ. ವಿವೇಕಾನಂದರಿಗೂ ಏಕಾಂತದಲ್ಲಿ ನಡೆದ ಕಡುದುಃಖಪ್ರಸಂಗವೊಂದನ್ನು ಹೀಗೆ ಚಿತ್ರಿಸಿದ್ದಿತು:—

ವಿವೇಕಾನಂದರು :— '' ಸತ್ಯವೇ ? ''

ರಾಮಕೃಷ್ಣರು :— '' ಸತ್ಯವಪ್ಪಾ ಸತ್ಯವು! ''

ವಿವೇ :— '' ಸತ್ಯವೇ ಹೌದೇ ?? ''

ರಾಮ :— '' ಹೌದು ಹೌದು, ಸತ್ಯವೇ ಹೌದು !! ''

ವಿವೇ :— '' ನಿಜವಾಗಿಯೂ ಸತ್ಯವೇ ??? ''

ರಾಮ :— '' ಸತ್ಯಸತ್ಯವಾಗಿಯೂ ಹೇಳುತ್ತೇನೆ—ತ್ರಿವಾರ ಸತ್ಯ !!! ''

ಆಯಿತು, ಪರಮಹಂಸರ ಕಂಠವು ಉಬ್ಬಿಬಂದಿತು. ಕಣ್ಣಿಂದ ಅಶ್ರುಧಾರೆಯು ಅಖಂಡವಾಗಿ ಸುರಿಯಹತ್ತಿತು. ವಿವೇಕಾನಂದರನ್ನು ಬಿಗಿದಪ್ಪಿಕೊಂಡುಬಿಟ್ಟರು. ಅವರೂ ಇವರೂ ಕೂಡಿಯೇ ಅಪಾರವಾಗಿ, ಅನಿರ್ವಚನೀಯವಾಗಿ ಅಶ್ರುಧಾರೆಯನ್ನು ಕರೆಯ ಹತ್ತಿದರು !!!"

ಅಹಾ! ಜ್ಞಾನಭಿಕ್ಷುವಿಗೆ ಮೈಮೇಲೆ ಲಕ್ಷ್ಯವೇ ಉಳಿಯಲಿಲ್ಲ. ಅವರ ಕಣ್ಣೀರಿನ ಕಥೆಯಲ್ಲಿ ಈತನ ಕಣ್ಣೀರೂ ಬೆರೆತು ಅಶ್ರುಧಾರೆಯು ತ್ರಿವೇಣೀಸಂಗಮವೇ ಆಯಿತು! ರಾಮಕೃಷ್ಣರಿಂದ ಧನ್ಯರಾದರೆನ್ನುವ ವಿವೇಕಾನಂದರೇ ಮುಂದೆ ಮತ್ತೊಂದುದಿನ ರಾಮಕೃಷ್ಣರ ಅವಸಾನದ ಅನಂತರ ತ್ರಿದಂಡಿಸನ್ಯಾಸಿಗಳಾಗಿ ದಕ್ಷಿಣಹಿಂದುಸ್ಥಾನದಲ್ಲಿ ಅಲೆದಾಡುತ್ತಿರುವಾಗ ಒಂದು ಬಂಡೆಯಮೇಲೆ ಬಿದ್ದುಕೊಂಡು ಹೀಗೆ ದುಃಖಿಸುತ್ತಿದ್ದರಂತೆ—"ಅಹಾ! ನನ್ನ ಜನ್ಮವು ವ್ಯರ್ಥವಾಯಿತಲ್ಲಾ! ಮುದುಕನ ಬಳಿಯಲ್ಲಿದ್ದು ಹಾಳಾಗುವದಕ್ಕಿಂತ ನಾನು ಇನ್ನಾವನಾದರೂ ಒಬ್ಬ ಯೋಗಿಯ ಬಳಿಯಲ್ಲಿ ನಿಂತು ಯೋಗಾಭ್ಯಾಸವನ್ನು ಮಾಡಿದ್ದರೆ ಧನ್ಯನಾಗುತ್ತಿದ್ದೆನಲ್ಲಾ! ಈಗಾದರೂ ಏನಾಯಿತು? ಗಾಜೀಪುರದ 'ಪವಾರೀಬಾಬಾ' ಇವರ ಶಿಷ್ಯನಾಗಿ ಯೋಗಗ್ರಹಣವನ್ನು ಮಾಡಿಬಿಡಲೇ? ರಾಮಕೃಷ್ಣರ ಶಿಷ್ಯನಾಗಿ ಕೆಟ್ಟೆನಲ್ಲಾ! ಏನು ಮಾಡಲಿ?—ಏನು ಮಾಡಲಿ-ಎಲ್ಲಿ ಹೋಗಲಿ??-ಅಯ್ಯೋ! ಅವರ ಭರವಸವನ್ನಾದರೂ ಏನು ಹಿಡಿಯಲಿ! ಇಲ್ಲಿಯೇ ಹೀಗಾಯಿತು. ಇನ್ನು ಅಲ್ಲಿ ಹೇಗಾಗುವದೆಂದು ಯಾರುಬಲ್ಲರು! ಬೀಳುವದೊಮ್ಮೆ ಬಿದ್ದಿದ್ದೇನೆ, ಇದೇ ಇರಲಿ! ಇನ್ನಾವದನ್ನೂ ಆಶಿಸಿ ಫಲವಿಲ್ಲ!!!" ಎಂದು ಕೊನೆಗೆ ಸಮಾಧಾನತಾಳಿ, ಚೇತರಿಸಿಕೊಂಡು ಎದ್ದು ಹೊರಟರಂತೆ.

ನೆಲೆಯಿಲ್ಲದ ಮಡುವಿನಲ್ಲಿ ಈಸುತ್ತಿರುವವನು ಕೈಸೋತು,

ದಿಕ್ಕುಗೆಟ್ಟು, ಹೈರಣಿಸಿ, ದಂಡೆಯನ್ನು ಸಮೀಪಿಸುವಷ್ಟರೊಳಗಾಗಿ ಮೇಲಿನಿಂದೊಂದು ಮಹಾಪೂರ ಬಂದು ಸೆಳವಿಗೆಳೆದರೆ ಏನು ಸ್ಥಿತಿಯಾಗಬೇಕು! ವಿಧಿಯು ನಮ್ಮ ನಾಯಕನನ್ನು ಇಂಥ ಕಿಂಭೂತ ಕಿಮಾಕಾರವಾದ ಅಕರಾಳ-ವಿಕರಾಳ ರಾಕ್ಷಸಭೂಮಿಗೆ ಎಳೆಯುವದಕ್ಕಿಂತ ದೊಡ್ಡದೊಂದು ಪಡಿಗಲ್ಲನ್ನು ಎತ್ತಿ ತಲೆಯಮೇಲೆ ಹಾಕಿದ್ದರೆ ಲೇಸಾಗುತ್ತಿತ್ತು!! ಆತನಿಗೀಗ ಏನೂ ಅರಿಯದಾಯಿತು. ಭಕ್ತರ ಜೀವನದಲ್ಲಿ ಇಂಥ ವಜ್ರಾಘಾತಗಳ ಅಗಣಿತ ವೃಷ್ಟಿಯಾಗುತ್ತಿರುವದೆಂತಲೇ ಶ್ರೀ ಬಸವಣ್ಣನವರು-"ಭಕ್ತಿಯೆಂಬುದು ಮಾಡಬಾರದ್ದು ಕಾಣಯ್ಯಾ! ಹೋಗುತ್ತೆನ್ನ ಕೊರೆವದು, ಬರುತ್ತೆನ್ನ ಕೊರೆವದು! ಶಿವಶಿವಾ ನಿಮ್ಮ ಭಕ್ತಿ ಬಾಳ ಬಾಯಧಾರೆ ಕಾಣಯ್ಯಾ! ಕೂಡಲಸಂಗಮದೇವಾ!!!" ಎಂದು ಮೊರೆ ಇಟ್ಟಿದ್ದಾರೆ.



# ೬. ಸತ್ಸಂಗ.

ಜ್ಞಾನಭಿಕ್ಷುವಿನ ಮುಖವೆಲ್ಲಾ ಈಗ ಕಂದಿಕುಂದಿ ಹೋಗಿದೆ. ಮೈಮೇಲಿನ ಬಟ್ಟೆಗಳೆಲ್ಲಾ ಅಸ್ತವ್ಯಸ್ತರೀತಿಯಲ್ಲಿವೆ. ಉಟ್ಟ ಧೋತರದ ಚುಂಗು ತಾನೇ ಉಚ್ಚಿ ಜೋತಾಡುತ್ತಿದೆ. ಮುಖದಮೇಲೂ, ತಲೆಯಮೇಲೂ ಹಾಳೂರಲ್ಲಿ ಹುಲ್ಲು ಬೆಳೆದಂತೆ ವಿಕಾರವಾಗಿ ಕೂದಲು ಬೆಳೆದಿವೆ. ಅವನಿಗಿನ್ನಾವದರ ಕಡೆಗೂ ಲಕ್ಷ್ಯವಿಲ್ಲ. ಹೇಗೋ ಏನೋ ಪ್ರಾಣಧಾರಣೆ ಮಾಡಿಕೊಂಡು-'ಬಾಲವತ್-ಉನ್ಮತ್ತವತ್' ಜೀವಿಸಿಕೊಂಡು ಇದ್ದಾನೆ. ಅವನಿಗೆ ಊಟದಲ್ಲಿ ರುಚಿಯಿಲ್ಲ, ನಿದ್ರೆಯಲ್ಲಿ ಸುಖವಿಲ್ಲ, ಯಾರ ಜೊತೆಯಲ್ಲಿಯೂ ಕೂಡಿಕೊಂಡಿರಲು ಹಿಗ್ಗಿಲ್ಲ. ಎತ್ತನೋಡಿದತ್ತ ಅಂಧಕಾರ. ಏನು ನೋಡಿದರೂ ಅವನಿಗೆ ಹರುಷವಿಲ್ಲ. **ಸಮಸ್ತ ಜಗತ್ತು ಅವನಿಗೆ ಅನಾಯಕಸಾಮ್ರಾಜ್ಯವಾಗಿ ತೋರುತ್ತಿದೆ.** ಜೀವನವೆಂಬುದೊಂದು ಕಣ್ಣುತೆರೆಯದ ಕುನ್ನಿಯ ಮರುಳಾಟವೆಂದು ಅನಿಸುತ್ತಿದೆ. ವಿಧಿಯ ಅಂಧಚಕ್ರದಲ್ಲಿ ಅರಿಯದೆ ಜೀವಿಗಳ ಜೀವನವು ನುಚ್ಚುನುರಿಯಾಗುತ್ತಿದೆಯೆಂದು ಅವನಿಗೆ ಕಾಣುತ್ತಿದೆ. ಮೃತ್ಯುವಿನ ದವಡೆಯ ಕಡೆಗೆ ಪ್ರಾಣಿಗಳು-ದೀಪಕ್ಕೋಡುವ ಪತಂಗಗಳಂತೆ ಕ್ಷಣಸುಖದ ಆಶೆಗೆ, ಘನದುಃಖವನ್ನು ನುಂಗಿಕೊಳ್ಳುತ್ತ ಸ್ವಮಾಯೆಯಿಂದ ಭ್ರಮೆಗೊಂಡು ಏನೊಂದರಿಯದ ಕುರಿಗಳಂತೆ ಓಡುತ್ತಿವೆಯಲ್ಲಾ-ಎಂದು ಮರಮರನೆ ಮರಗುತ್ತಾನೆ. ಈಗ ಈತನಿಗೆ ಜೀವನವೆಂಬುದೇ ಒಂದು ಒಡೆಯಲಾರದ ಒಗಟವಾಗಿ ಬಿಟ್ಟಿದೆ. ನಾವು ಯಾತಕ್ಕಾಗಿ ಬದುಕಿರುವದು? ಸುಖಕ್ಕೋ?? ಅಹಾ! ಸುಖವಂತೂ ಮೇಲೇ ಕಾಣಿಸುತ್ತಿದೆಯಲ್ಲಾ!! ಹಾಗಾದರೆ ದುಃಖಕ್ಕೋ? ದುಃಖಕ್ಕಾಗಿ ಬದುಕುವದು ಇನ್ನಾವ ಆಶೆಯಿಂದ?! ಅಥವಾ ಮುಂದೆ ಇನ್ನೆಲ್ಲಿಯೋ ಪರವೆಂಬು

ದರಲ್ಲಿ ಸುಖವಿದೆಯೆಂದೋ? ಅಯ್ಯೋ! ಇಹವಿದ್ದಂತೆ ಪರ, ಪರ ವಿದ್ದಂತೆ ಇಹ. "ಯದಿಹ ತದಮುತ್ರ"!! ಇಲ್ಲಿ ತೃಣದಷ್ಟು ಸುಖವೂ, ಗಿರಿಯಷ್ಟು ದುಃಖವೂ ಇದ್ದರೆ ಅಲ್ಲಿ ಇನ್ನೊಂದು ರವೆ ತೂಕದ ಸುಖವು ಹೆಚ್ಚಿಗಿರಬಹುದು. ಅಥವಾ, ಅಪರಿಚ್ಛಿನ್ನ ಸುಖವೇ ಇದೆಯೆಂತಲೂ ಇಟ್ಟುಕೊಳ್ಳೋಣ. ಆದರೇನು? ಅಲ್ಲಿಯಾದರೂ ಹಾಗೇ ಹಳೆಹದ್ದಿನಂತೆ ಏನೊಂದು ಕಾಲ ಆ ಸುಖವೆಂಬದನ್ನು ಮೇಲು ಕಾಡಿಸುತ್ತ ಬೀಳುವದು??? ಏನು ಸುಖವೋ—ಏನು ದುಃಖವೋ! ಇದಾವದೂ ಜೀವನದ ಉದ್ದೇಶವಾಗಿರಲಾರದು. ಹಾಗಾದರೆ ಅದರ ನಿಶ್ಚಿತವಾದ ಉದ್ದೇಶವೇನು? ಅಥವಾ ಅನಿಶ್ಚಿತವೇ ಅದರ ನಿಶ್ಚಿತ ಉದ್ದೇಶವೋ??? !!!"

ಹೀಗೆ ಪರಿಪರಿಯಿಂದ ಪ್ರಲಪಿಸುವನು. ಈತನು ಊಟಕ್ಕೆ ಕುಳಿತನೆಂದರೆ ನೋಡಬೇಕು! ಕಣ್ಣು ಮುಚ್ಚಿರುತ್ತಾನೆ! ನಾಲಿಗೆ ಕಚ್ಚಿರುತ್ತಾನೆ!! ಹಣೆಗೆ ಕೈ ಹಚ್ಚಿರುತ್ತಾನೆ!!! "ಅಹಾ ಅನ್ನವೇ, ನಿನ್ನನ್ನು ತಿಂದು ತೇಗಹತ್ತಿ ಏನೊಂದು ಕಾಲವಾಯಿತಲ್ಲಾ. ಮನು ಷ್ಯರೆಂಬವರು ತಮ್ಮ ಶತಾಯುಷ್ಯದಲ್ಲಿ ನಿನ್ನನ್ನು ಲಕ್ಷಗಟ್ಟಲೆ ಸಾರೆ ತಿಂದು ತಿಪ್ಪೆಗೆಡುವರಲ್ಲಾ.!! ತುಂಬಿದ ಬೆಳೆಯುಳ್ಳ ಹೊಲಗದ್ದೆಗಳ ಅಕ್ಷಯರಾಶಿಯನ್ನೆಲ್ಲಾ ನಾವು ವರುಷವರುಷದೊಳಗಾಗಿ ನುಂಗಿ ನೀರುಕುಡಿದು, ಕಾಲಪ್ರಸಕ್ಕೆ ಹೊಳೆ-ಹಳ್ಳಗಳ ಏರಾಸುವೊಸಳೆಗಳನ್ನು ಧ್ವಂಸಮಾಡಿ ಬಿಡುತ್ತಿರುವೆವಲ್ಲಾ!!! ಇಷ್ಟೆಲ್ಲಾ ಹಡಬಡಿಸಿ ಮೇಲೆ ಮಾಡುವದೇನು??? ಪುನರಪಿ ಭೋಜನಂ ಪುನರಪಿ ವಿಸರ್ಜನಂ! ಅಯ್ಯೋ ಅನ್ನವೇ ಸಾಕು ಸಾಕು. ನಿನ್ನನ್ನು ಗೋಳಾಡಿಸಿ ಗೋಳಾ ಡಿಸಿ, ನಾವು ಮಾಡುವ ಪುರುಷಾರ್ಥವಾದರೂ ಅಂಥದೇನಿದೆಯೆನ್ನಲಿ? ಧಿಕ್ ಧಿಕ್!" ಹೀಗೆಂದು ಮನದೊಳಗೇ ಕುದಿಕುದಿದು ಪರಿತಪಿಸು ತ್ತಿದ್ದಾನೆ. **ಜೀವನದ ಯಾವ ಭೋಗವನ್ನು ಅಂಗೀಕರಿಸು**

**ವಾಗಲೂ ಅದರ ಸಾರ್ಥಕತೆಯಿಲ್ಲದ ಸ್ವೀಕಾರವನ್ನು ಕುರಿತು ಕಳವಳಿಸಿ ಕಣ್ಣೀರಿಡುತ್ತಾನೆ.**

ಈಗ ಈತನು ಅರವಿಂದಯೋಗಿಗಳನ್ನು ಹಿಂದಿನ ಆ ವಾಕ್ಯಗಳ ಸಲುವಾಗಿ ಸಂಧಿಗ್ಧದೃಷ್ಟಿಯಿಂದ ನೋಡುತ್ತಿದ್ದನಾದರೂ ಅವರ ಗ್ರಂಥದಲ್ಲೋದಿದ ಒಂದು ವಾಕ್ಯವು ಇಂದು ಇವನ ನೆನಪಿಗೆ ಬಾರದೆ ಉಳಿಯಲಿಲ್ಲ. ಅದೇನೆಂದರೆ—"**ಸಂಶಯವೃತ್ತಿಯು ಈ ಯುಗದ ಮಾನವರ ಮುಖ್ಯ ದೋಷವಾಗಿದೆ. ಆದರೂ ಅದಕ್ಕೆ ಹೆದರುವ ಕಾರಣವಿಲ್ಲ.** ಅದು ಒಮ್ಮೆ ಮೂಡಿತೆಂದರೆ, ಮತ್ತೆ ಎಂದಿಗಾದರೊಮ್ಮೆ ಮರೆಯಾಗಿಯೇ ತೀರುವದು. ಆ ವರೆಗೆ ಮಾತ್ರ ಧೈರ್ಯ ಹಿಡಿಯುವದು ಅಗತ್ಯವಾಗಿದೆ. ಆದರೆ ಹಾಗೆ ತಾಳ್ಮೆಯಿಂದ ಇರಲಿಕ್ಕಾಗದಿದ್ದರೆ ಸತ್ಸಂಗವನ್ನು ದೊರಕಿಸಬೇಕು. ಅದೂ ಶಕ್ಯವಾಗದಿದ್ದರೆ, ಶಾಸ್ತ್ರಾಭ್ಯಾಸಂಗವನ್ನು ಮಾಡಬೇಕು. ಇದು ಕೂಡ ಆಗದಿದ್ದರೆ ವಿಶ್ವಚಾಲಕನ ಮೇಲೆ ಹೇಗೋ ಹೊರೆಹಾಕಿ ನಿಲ್ಲುವದನ್ನು ಅಭ್ಯಾಸ ಮಾಡಬೇಕು." ಈ ಮಾತು ಸ್ಮರಣೆಗೆ ಬಂದೊಡನೆಯೆ ನಮ್ಮ ನಾಯಕನಿಗೆ ಕಗ್ಗತ್ತಲೆಯಲ್ಲಿ ಒಂದು ಎಲ್ಲಿಂದಲೋ ಕೈದೀಪವು ಕಂಡಂತಾಯಿತು. ಮಹಾಸಾಗರದಲ್ಲಿ ಆಶೆತಪ್ಪಿದ ನಾಸ್ಕೋಡಿಗಾಮನಿಗೆ ಕೇಪ್ ಆಫ್‌ಗುಡ್‌ಹೋಪ್ ಸಿಕ್ಕಂತಾಯ್ತು. ಜೀವನವೆಂಬುದರಲ್ಲಿ ಕಡುನಿರಾಶೆಯು ತುದಿಗೂ ಒಂದು ಆಶೆಯ ಕಿಡಿಯು ಯಾವ ಮಾಯೆಯಿಂದಲಾದರೂ ಕಣ್ಣಿಗೆ ಬೀಳುತ್ತಿರುವದೆಂತಲೇ ಪ್ರಾಣಿಗಳು ಬದುಕಿ ಉಳಿಯುವವು.

ಸತ್ಸಂಗದ ಅಗತ್ಯವೇನೋ ಹೊಳೆಯಿತು. ಆದರೆ ಅಂಥ ಸತ್ಪುರುಷರು ಸಿಗಬೇಕೆಲ್ಲಿ?! ಅರವಿಂದರ ದರ್ಶನವೋ ಒಳ್ಳೊಳ್ಳೆಯವರಿಗೂ ಅಲಭ್ಯ! ರಾಮಕೃಷ್ಣರೂ ವಿವೇಕಾನಂದರೂ ಲೋಕಯಾತ್ರೆಯನ್ನು ಮುಗಿಸಿ ಹೋಗಿದ್ದಾರೆ! ಇನ್ನಾರ ಸನ್ನಿಧಿಗೆ ಹೋಗಬೇಕು? ಏನೇ

ಇರಲಿ—ನಾಲ್ಕು ಪ್ರಾಂತಗಳಲ್ಲಿ ದೊಡ್ಡ ಅವಧೂತ ಮೂರ್ತಿಗಳೆಂದು ಹೆಸರಾದ "**ಯೋಗಾರೂಢ**" ಯತಿಗಳ ದರ್ಶನವನ್ನು ದೊರಕಿಸೋಣವೆಂದನು. ತನ್ನೂರ ಸಮೀಪದಲ್ಲೇ ಅವರ ಶಿಷ್ಯನೊಬ್ಬನಿದ್ದದ್ದು ಮೊದಲೇ ಗೊತ್ತಿತ್ತು. ಅವನಿಗೂ ನಮ್ಮ ನಾಯಕನ ವಿಷಯವು ಕರ್ಣೋಪಕರ್ಣವಾಗಿ ತಿಳಿದಿತ್ತು. ಇಬ್ಬರೂ ಕೂಡಿ ಹೊರಟರು. ಹಾದಿಯಲ್ಲಿ ನವಯುವಕನು ತಾನು ಅವರ ಶಿಷ್ಯನಾಗಲಿಕ್ಕೆ ಕಾರಣವೇನೆಂಬದನ್ನೂ, ಆ ಯತಿವರರ ಮಹಾಮಹಿಮೆಯೆಂಥದೆಂಬದನ್ನೂ ವಿವರಿಸಿ ಹೇಳಿದನು:— "ನಾನೊಮ್ಮೆ ಹನ್ನೆರಡು ವರುಷಗಳ ಹಿಂದೆ ಭಾರೀ ಜಡ್ಡಾಗಿ ಬಿದ್ದಾಗ ಉಳಿಯುವ ಭರವಸವೇ ಇರಲಿಲ್ಲ. ಎಲ್ಲರೂ ನಿರಾಶರಾಗಿದ್ದರು. ಅಂದಿನ ರಾತ್ರಿ ನನ್ನ ಸ್ವಪ್ನದಲ್ಲಿ ಯತಿವರರು ಬಂದು, 'ಮಗನೇ ಅಂಜದಿರು' ಎಂದು ಆಶೀರ್ವದಿಸಲು ಮರುದಿವಸದಿಂದ ಗುಣವಾಗುತ್ತಲೇ ಬಂತು. ಅಂತೂ ಅವರ ಕೃಪೆಯಿಂದ ಉಳಿದುಕೊಂಡು, ಅದರ ನಿಮಿತ್ತವಾಗಿ ಅವರ ದರ್ಶನಕ್ಕೆಂದು ಹೋಗಿ, ಪಾದಕ್ಕೆ ಬಿದ್ದು—ನನ್ನನ್ನುಳಿಸಿದ ತಂದೆಯೇ, ನನಗೆ ಮುಂದೇನು ಹೇಳುವಿಯೆಂದೆನ್ನಲು, ಅದಕ್ಕವರು,—ಮಗನೇ, ಶಿವನಾಮವನ್ನು ಹಿಡಿದರೆ ಆಯಿತೆಂದರು. ಅಂದಿನಿಂದ ನಾನು ಅವರ ಅನುಗ್ರಹದಲ್ಲಿದ್ದೇನೆ. ನನ್ನ ಧ್ಯಾನದಲ್ಲಿ ನನಗೆ ಹಿಮಾಲಯ ಋಷಿಗಳ ದರ್ಶನವಾಗುತ್ತಿರುತ್ತದೆ. ಮುಖ್ಯವಾಗಿ ಗುರು ಭಕ್ತಿ ಬೇಕು. "ಗುರುವಿನಮೇಲೆ ಭಕ್ತಿಯನ್ನಿಟ್ಟರೆ, ತಾನೇ ಆತ್ಮಜ್ಞಾನವೂ ಆಗುವದು, ಶಿವಜ್ಞಾನವೂ ಆಗುವದು. ಮುಖ್ಯವಾಗಿ ಅದೊಂದು ಮಾತ್ರ ಬೇಕು.' ಎಂದು ಮೊದಲಾಗಿ ಅವನು ಹೇಳುತ್ತಿರುವ ಹಾಗೆ ಈತನ ಮನಸ್ಸಿನಲ್ಲಿ "ಇವನೇನೋ ಸುಳ್ಳು ಬಂಬಗಾರನಾಗಿರುವಂತೆ ಕಾಣುತ್ತದೆ. ಗುರುಭಕ್ತಿ ಬಂದರೆ ಶಿವಜ್ಞಾನ ತಾನೇ ಆಗುವದಂತೆ. ಶಿವಭಕ್ತಿ ಬಂದರೆ ಉಳಿದದ್ದೆಲ್ಲ ತಾನೇ ಆಗಲಿಕ್ಕಿಲ್ಲವಲ್ಲವೇ! ಇರಲಿ. ಹಿಮಾಲಯದ ಋಷಿಗಳ ಸಂಗತಿಯನ್ನು ಪರೀಕ್ಷಿಸಿ ನೋಡೋಣ" ಎಂದುಕೊಂಡು

ಆತನಿಗೆ—"ನೀವು ಧನ್ಯರು. ಆ ವಿಶ್ವಾಸ ಎಲ್ಲರ ದೈವದಲ್ಲಿ ಎಲ್ಲಿ ಸಾಧ್ಯವಿದೆ? ಇದ್ದವರು ಧನ್ಯರು! ನೀವು ಒಳ್ಳೇ ಸಾಧಕರು. ಇಂದಿನ ವರೆಗೆ ನೀವು ನಿಮ್ಮ ದೃಷ್ಟಾಂತದಲ್ಲಿ ಬರುವ ಆ ಋಷಿಗಳಿಗೆ ಏನಾದರೂ ಪ್ರಶ್ನೆಗಳನ್ನು ಕೇಳಿರುವಿರೇನು?" ಅದಕ್ಕೆ ಆತನು ಒಳಬೇತನ್ನರಿಯದೆ,—'ಇಲ್ಲರೀ! ತಾವೇ ತಮ್ಮ ನಾಮಧಾಮಗಳನ್ನು ಹೇಳಿ ಹೊರಟುಹೋಗುತ್ತಿರುತ್ತಾರೆ" ಎಂದನು. ಆಗ ಈತನು ತನ್ನ ಮನದಲ್ಲಿ—"ಕೈಯಲ್ಲಿ ಸಿಕ್ಕರೆ ಯಾರಾದರೂ ಬಿಡುವರೇ? ಬಿಟ್ಟೆನೆಂದು ಹೇಳುವವನಿಗೆ ಸಿಕ್ಕಿರುವದುಂಟೇ? ಇದೆಲ್ಲಾ ಸುಳ್ಳುಹರಟೆ." ಎಂದುಕೊಂಡನು. ಇಷ್ಟೊತ್ತಿಗೆ ಮೋಟಾರು ಆ ಯತಿವರರ ದಿವ್ಯಾಶ್ರಮದ ಮುಂದೆ ಬಂದು ನಿಂತಿತು. ಆ ಸತ್ಪುರುಷರನ್ನು ಯಾವಾಗ ಕಂಡೇನೆಂಬ ತವಕವು ಹೆಚ್ಚಿತು.

ಆಶ್ರಮದ ಭವ್ಯಮಂದಿರಗಳ ಬಳಿಯಲ್ಲಿದ್ದ ಅಂಗಡಿಗಳಲ್ಲಿ ಕಾಯಿಕರ್ಪೂರಗಳನ್ನು ಕೊಂಡುಕೊಂಡು ಮುಖ್ಯಮಂದಿರದ ಕಡೆಗೆ ನಡೆದರು. ವಾಡಿಕೆಯಾಗಿ ಯಾವಾಗಲೂ ಅವರಿರುತ್ತಿರುವ ಮಂದಿರದಲ್ಲಿ ಅಂದು ಅವರಿರಲಿಲ್ಲ. ವಾರ್ಷಿಕೋತ್ಸವದ ಉಪಯೋಗಕ್ಕೆಂದು ದರ್ಶನಪೀಠವನ್ನು ಕಟ್ಟಿಸುವ ಕೆಲಸವು ನಡೆದದ್ದರಿಂದ ಅವರು ಅತ್ತ ಕಡೆಯಲ್ಲೇ ಇದ್ದಾರೆಂದು ತಿಳಿಯಿತು. ಇವರೂ ಅತ್ತ ಕಡೆಗೇ ಹೊರಟರು. ಅಲ್ಲಿ ಹೊಸ ಕಟ್ಟಡದ ಇದುರಿಗೊಂದು ಖುರ್ಚಿಯ ಮೇಲೆ ನೂರಕ್ಕೆ ಮಿಕ್ಕಿದ ಆ ವೃದ್ಧಯತಿಯು ಕುಳಿತುಕೊಂಡಿದ್ದನು. ಸುತ್ತುಮುತ್ತಲೂ ಭಕ್ತ-ಭಕ್ತೆಯರು ನೆರೆದಿದ್ದರು. ಅವರೊಳಗಿಂದೆಲ್ಲಾ ದಾಟಿ, ನಮ್ಮವರಿಬ್ಬರೂ ಸದಿಗೆ ಹೋಗಿ ಮುಟ್ಟಿದರು. ಅಲ್ಲಿ ಆ ಮಹಾತ್ಮನು ಬಂದು ನೇಮವನ್ನು ಕೃತಿಯಿಂದ ವ್ಯಕ್ತಗೊಳಿಸುತ್ತಾ ಕುಳಿತಿದ್ದನು. ಅದೇನೆಂದರೆ—ಕಾಯಿಕರ್ಪೂರ ತಂದವರನ್ನು ತನ್ನ ಬದಿಯಲ್ಲೇ ಕುಳಿತ ಸೇವಕರ ಬಳಿಗೆ ಸಾಗಿರೆಂದು ಕೈಸನ್ನೆ

ಮಾಡುತ್ತಲೂ ಪೈ ಕಾಸುಗಳ ಕೈಯನ್ನು ಮುಂದೆ ಮಾಡಿಕೊಂಡು ಹೊರಟವರನ್ನು ತನ್ನ ಕಡೆಗೆ ಬರಲಿಕ್ಕೆ ಕೈ ಮಾಡುತ್ತಲೂ ಇದ್ದನು. ಎಡಗೈಯಲ್ಲಿ ಧನವನ್ನೂ, ಬಲಗೈಯಲ್ಲಿ ಸಂಕೇತಮುದ್ರೆಯನ್ನೂ ತಾಳಿದ ಈ ದೈವತವನ್ನು ಯಾವ ಹೆಸರಿನಿಂದ ಕರೆಯಬೇಕೋ ತಿಳಿಯದು! ಅಲ್ಲಿ ನಿಂತ ಕೆಲವು ಭಕ್ತರು ಯಾವ ಯೋಗ ವನ್ನು ಗ್ರಹಣ ಮಾಡಿದ್ದರೋ ಹೇಳುವದು ಕಷ್ಟ. ಅವರ ಲಾಂಛನದ ಮೇಲಿಂದ ಅವರ ಯೋಗವು ಯೋಗಾಯೋಗವೇ ಆಗಿರಬೇಕೆಂದೂ ಅನಿಸದಿರದು. ಬಿಳಿಯ ಬಟ್ಟೆಗಳನ್ನು ಧರಿಸಿ, ಬೀಸಣಿಗೆಯ ಬೈತಲನ್ನು ತೆಗೆದು ನೂರಾ ಎಂಟೇ ರುದ್ರಾಕ್ಷಿಗಳು ತಮ್ಮ ಯೋಗಕ್ಕೆ ಸಾಲವೆಂದು, ಸಾವಿರ ಸಣ್ಣ ಮಣಿಗಳ ಬಹು ದೀರ್ಘವಾದ ಜಪಮಾಲೆಯನ್ನು – ಸೇದೋ ಬಾವಿಯ ಹಗ್ಗ ಸುತ್ತಿ ಕೊಂಡಂತೆ — ಹೆಗಲ ಮೇಲೆ ಹಾಯಿಸಿ ಇಳಿಬಿಟ್ಟುಕೊಂಡು, ಲೋಕಾಂತದಲ್ಲಿ ಕೂಡ, ಏಕಾಂತವನ್ನನುಭವಿಸುವವರಂತೆ ಜಪದಲ್ಲಿ ಮಗ್ನರಾಗಿ ನಿಂತಿದ್ದರು. ಇಷ್ಟರಲ್ಲಿ ಒಬ್ಬ ಆಳು ಬಂದು– "ಯಪ್ಪಾ! ಗಚ್ಚು ಎಲ್ಲಾ ಆಯಿತು!" ಎಂದು ಹೇಳಿದನು. ಕೂತಲ್ಲೇ ಲೋಕ ವನ್ನೆಲ್ಲಾ ಸಂಚರಿಸುವ ಸಾಮರ್ಥ್ಯವುಳ್ಳ ತ್ರೀಕಾಲಜ್ಞರಿಗೆ ಒಮ್ಮೆಲೇ ದಿಗಿಲು ಬಿದ್ದದ್ದನ್ನು ನೋಡಿ, ನಮ್ಮ ಜ್ಞಾನಭಿಕ್ಷುವಿಗೆ ಅದಕ್ಕಿಂತ ಹೆಚ್ಚಿನ ದಿಗಿಲು ಬಿತ್ತು. ಸ್ವಾರಿ ತತ್ತರಿಸುತ್ತ ಎದ್ದು, ಗಚ್ಚು ಹಾಕಿದ್ದ ಸ್ಥಳಕ್ಕೇ ಹೊರಟಿತು. ಮೇಲು ಮಾಳಿಗೆಗೆ ಸಮೀಪವಾಗಿ ಮೇಲಕ್ಕೆ ಕೆಲಸ ನಡೆದದ್ದರಿಂದ ವೃದ್ಧಯುತಿಯು ಹುಬ್ಬಿಗೆ ಕೈ ಹಚ್ಚಿ ಮಂಜುಗಟ್ಟಿದ ಕಣ್ಣುಗಳನ್ನು ಮೇಲಕ್ಕೆತ್ತಿ ಮಿಕಿಮಿಕಿ ನೋಡಹತ್ತಿ ದನು. ಯಾಕೆಂದರೆ ವೇಳೆ ಮುಗಿಯುವದಕ್ಕಿಂತ ಮೊದಲೆ ಗಚ್ಚಾದ್ದ ರಿಂದ ಕೂಲಿಕಾರರು ಕೆಲಸ ಮಾಡದೆ ಕೂಲಿಯನ್ನೊಯ್ಯುವದು ಬಂತಲ್ಲಾ! ಎಂದು ಅವರ ಎಣಿಕೆ. ಆಗ ನಮ್ಮ ನಾಯಕನಿಗೆ ಅವರ

ದರ್ಶನಕ್ಕೆ ಹೋದದ್ದು ವ್ಯರ್ಥವೆನಿಸಿತು. ಆದರೂ ಆ ಜೊತೆಗಾರ ನೊಬ್ಬ ಇದ್ದಾನಲ್ಲಾ! ಅವನು ಹಾಗೇ ಯತಿಯ ಪಾದಕ್ಕೆ ಬಿದ್ದು– "ಯಪ್ಪಾ ಸಾಧನವು ಸರಿಯಾಗಿ ಸಾಗಲೊಲ್ಲದು, ಏನು ಹೇಳುವಿ?" ಎಂದು ದೈನ್ಯದಿಂದ ಪ್ರಾರ್ಥಿಸಿದನು. ಅವನೇನೋ ಬೆಳ್ಳಕ್ಕಿಯಂತೆ ಆ ಗಚ್ಚಿನ ಕಡೆಗೆ ನೋಡುತ್ತಿದ್ದಾನೆ, ಇವನೇನೊ ಕೂಗಿಕೊಳ್ಳು ತ್ತಲೇ ಇದ್ದಾನೆ. ಕಣ್ಣು ಅತ್ತ ಕಡೆಗಿದ್ದರೂ ಕಿವಿಗಳೇನೊ ಇತ್ತ ಕಡೆಗೆ ತುಸು ಹೊರಳುತ್ತಿದ್ದವೆಂದು ಕಾಣುತ್ತದೆ. ಹಾಗೆ ಮೇಲೆ ನೋಡುತ್ತಿದ್ದ ಹಾಗೆಯೇ 'ಒಳಿತಾಗುವದು' ಎಂದು ಅಭಯ ವಚನವನ್ನು ದಯಪಾಲಿಸಿದರು! ಒಳ್ಳೇ ಶಬ್ದ ಬಂತು–ಸಾಕೆಂದು ಅಷ್ಟಕ್ಕೇ ಶಿಷ್ಯನೂ ಹಿಗ್ಗಿದನು. ಆಗ ನಮ್ಮ ನಾಯಕನಿಗೆ ಬಹಳ ಆಶ್ಚರ್ಯವೆನಿಸಿತು. ಆ ಜೊತೆಗಾರನು ಮೊದಲು ತಮ್ಮೂರಿಂದ ಹೊರಟಾಗ ಹಾದಿಯಲ್ಲಿ ಏನೇನೋ ಸಾಧನದ ಜಂಬ ಹೇಳುತ್ತಿವನೇ ಈಗ ಅದಕ್ಕೆ ವಿಪರೀತವಾಗಿ ತನ್ನ ಗುರುವಿಗೆ ಪ್ರಶ್ನೆ ಮಾಡುತ್ತಿದ್ದಾನೆ· ಅತ್ತ ಆ ಗುರುವಿನ ಮಹಿಮೆ, ಇತ್ತ ಈ ಶಿಷ್ಯನ ಮಹಿಮೆ. ಎರಡೂ ಕೂಡಿ ನಮ್ಮ ನಾಯಕನಿಗೆ ಇಮ್ಮಡಿ ಅಗಾಧವಾಗುವಂತೆ ಮಾಡಿ ದವು. ಇಷ್ಟಾಗಿಯೂ ಕೂಡ ಆ ಶಿಷ್ಯನು ಮರಳಿ ಊರಿಗೆ ಹೊರಟಾಗ ಕೃತಾರ್ಥನಾದಂತೆಯೇ ಭಾವಿಸಿಕೊಂಡಿದ್ದನು. "ಮುಖ್ಯವಾಗಿ ಇಂಥ ಪ್ರೇಮ ಸಿಗುವದಿಲ್ಲ. ಇಂಥ ಪಾದ ಸಿಗುವದೂ ದುರ್ಲಭ!" ಎಂದು ಹೇಳುತ್ತಿದ್ದನು. ಅದಕ್ಕೆ ಜ್ಞಾನಭಿಕ್ಷುವೂ ತನ್ನ ಮನದೊಳಗೆ "ಮುಖ್ಯವಾಗಿ ಇಂಥಾ ಅಂಧ ಭಕ್ತಿ ದುರ್ಲಭ!" ಎಂದುಕೊಂಡನು.

ಅಂತೂ "ನೀರಿಲ್ಲದ ಬಾವಿಗೆ ಕರುಬಂದು ತಿರುಗಿದಾಗ ಆಗ ನೋಡು ದುಃಖಗಳನಂ" ಬಂತೆ ಬಂದದ್ದಕ್ಕೆ ಫಲವಿಲ್ಲದೆ ಹಿಂದಕ್ಕೆ ಹೊರಡಬೇಕಾಯ್ತು. ಇನ್ನೇನು ಉಪಾಯವು? ಹೇಗೂ ಹೊರ ಬಿದ್ದಿದ್ದೇನೆ, ಇನ್ನೊಂದು ಸ್ಥಾನವಿದೆ, ಅದನ್ನಿಷ್ಟು ನೋಡಿಕೊಂಡೇ

ಹೋಗೋಣ – ಎಂದು ಆಲೋಚಿಸಿದನು. ತಾನು ತನ್ನ ಜೀವನದಲ್ಲಿ ಕಂಡ ಮೊಟ್ಟಮೊದಲನೆಯ ಗುರೂಪದೇಶದ ಫ್ಯಾಕ್ಟರಿಗೇ ಬಲಿಬಿದ್ದವರೊಬ್ಬ ಪ್ರೊಫೆಸರರಿದ್ದರು. ಅವರು ಇಡೀ ದೇಶದಲ್ಲೆಲ್ಲಾ ಹೆಸರುವಾಸಿಯಾದವರು. ವಿಶ್ವವಿದ್ಯಾಲಯಗಳಲ್ಲಿ ತತ್ವಜ್ಞಾನದ ಅಧ್ಯಾಪಕರಾಗಿದ್ದವರು. ಅಲ್ಲದೆ ಅತ್ಯಂತ ಸಾತ್ವಿಕರೂ, ಬಾಲಕರಂತೆ ಸರಳ ಹೃದಯದವರೂ ಆಗಿದ್ದರು. ಅಂತೇ ಅಂಥಾ ಬೇಟೆಗಾರರ ಬಲೆಯಲ್ಲಿ ಬಿದ್ದಿರಬಹುದಾಗಿ ತೋರುತ್ತದೆ. ಇವರು ತತ್ತ್ವಜ್ಞಾನದ ಮೇಲೆ ಉದ್ಗ್ರಂಥಗಳನ್ನು ಬರೆದಿದ್ದರು. ಇವರ ಊರು ನಮ್ಮ ನಾಯಕನಿಗೆ ದಾರಿಯಲ್ಲೇ ಸಿಕ್ಕುವಂತಿದ್ದರಿಂದ ಅಲ್ಲಿಗೆ ಹೋದನು.

ಅವರ ನಡೆವಳಿಯು ನಿಜವಾಗಿಯೂ ತಿಳಿದುಕೊಂಡಿದ್ದ ಹಾಗೆ ಬಹಳ ಒಳ್ಳೆಯದಾಗಿತ್ತು. ಅವರು ಭೇದವಿಲ್ಲದೆ ಬಂದ ಅತಿಥಿಗಳನ್ನೆಲ್ಲ ಬಹಳ ಪರಾಮರಿಸುತ್ತಿದ್ದರು. ಮುಂದಿನದೇನೇ ಇರಲಿ, ಮುಖಾಮುಖಿಯಲ್ಲಿ ಯಾವ ಕಂಟಕವೂ ತೋರಲಿಲ್ಲ. ಇಷ್ಟೆಂದರೂ ಎಷ್ಟೋ ಒಳ್ಳೇದು.

ಆದರೆ— ಸಂಜೆಯ ವರೆಗೆ ಎಷ್ಟು ಮಾತುಕಥೆ ನಡೆದರೂ ಅವರು ಈತನ ಮನೆವಾರ್ತೆಗೆ ಸಂಬಂಧಿಸಿದ ಪ್ರಶ್ನೆಗಳನ್ನು ಕೇಳಿದರೇ ಹೊರತು ಇವನೆಷ್ಟು ಸಲ ಪ್ರಯತ್ನಿಸಿದರೂ ಅಧ್ಯಾತ್ಮವಿಷಯವೇ ಹೊರಡಲಿಲ್ಲ. ಕೊನೆಗೆ ಈತನೇ ಮುಂದಾಗಿ, ಅವರಿಗೆ ಏಕಾಂತದ ಭೆಟ್ಟಿಯ ಅಪೇಕ್ಷೆಯನ್ನು ತಿಳಿಸಿದನು. ಇವನು ತನ್ನ ಸ್ಥಿತಿಯನ್ನೆಲ್ಲ ನಿವೇದಿಸಿದ ಬಳಿಕ ಕೇಳಿಕೊಂಡದ್ದೇನೆಂದರೆ “ ನನಗೆ ಇನ್ನಾವದೂ ಬೇಡ, ಕೇವಲ ತಮ್ಮ ಆಂತರಿಕವಿಶ್ವಾಸದ ಪರಿಚಯವನ್ನು ಮಾಡಿಕೊಡಬೇಕು. ನನಗೆ, ಬೇರೆ ಶಾಸ್ತ್ರಗಳನ್ನು ಕೇಳುವದಕ್ಕಿಂತ ತಮ್ಮಂಥವರ ನಿಜಾನುಭವವನ್ನು ಕೇಳಿದರೆ, ನನ್ನ ದಾರಿ ಸುಲಭವಾಗುವದೆಂಬ ಆಶೆಯಿದೆ. ಅಷ್ಟು ಮಾತ್ರ ಮರೆಮಾಚದೆ ತಿಳಿಸಿದರೆ, ಮಹದುಪಕಾರವಾಗುವದು. ಆದರೆ

ಇದಕ್ಕೆ ಬದಲಾಗಿ ತಾವು ನನಗೆ, ಗುರೂಪದೇಶ ಹೊಂದೆಂದಾಗಲಿ, ಏನಾದರೊಂದು ಯೌಗಿಕಸಾಧನ ಮಾಡೆಂದಾಗಲಿ,–ಯಾವದಾದರೂ ಶಾಸ್ತ್ರವನ್ನು ಓದೆಂದಾಗಲಿ ಹೇಳಿದಿರಾದರೆ ಉಪಯೋಗವಿಲ್ಲ. **ಕೇವಲ- ತಾವು ಯಾವ ಶ್ರದ್ಧೆಗೆ, ಹೇಗೆ ಬಂದು ಮುಟ್ಟಿದಿರೆಂಬದನ್ನು ತಿಳಿಸಿದರೆ ಇವೆಲ್ಲವುಗಳಿಗಿಂತ ಸಾವಿರಪಟ್ಟು ಸಹಾಯಮಾಡಿದಂತಾಗುವದು. ''**

ಅದಕ್ಕೆ ಅವರು ತಮ್ಮ ಹರುಷವನ್ನು ವ್ಯಕ್ತಪಡಿಸಿ– ''ಆಹಾ! ಇಂಥಾ ಅದ್ಭುತರತ್ನವು ಇಲ್ಲೇ ನಮ್ಮ ಸಮೀಪದಲ್ಲೇ ಇದ್ದದ್ದನ್ನು ನೋಡಿ, ಅತಿಶಯವಾಗಿ ಆಶ್ಚರ್ಯವಾಗುತ್ತದೆ! '' **ಆದರೆ** '' ನಿಮ್ಮ ಪ್ರಶ್ನೆಗೆ ತಕ್ಕ ಉತ್ತರವನ್ನು ಹೇಳುವದಕ್ಕೆ ಈಗ ನನಗೆ ಅವಕಾಶವಿಲ್ಲವಲ್ಲಾ! ಕಾಲೇಜುಗಳ ಪರೀಕ್ಷಾಪತ್ರಿಕೆಗಳ ಕೆಲಸವಿದ್ದದರಿಂದ ನಾಳಿಗೇ ಈ ಊರಿಂದ ಹೊರಡಬೇಕಾಗಿದೆ. ಆದ್ದರಿಂದ ನಿಮ್ಮನ್ನು ಮುಂದಿನ ಸೂಟಿಯಲ್ಲಿ ಕರೆಯಿಸಿಕೊಳ್ಳುವೆನು '' ಎಂದು ವ್ಯಾಪಾರಿಗಳಂತೆ ನವಿಮಾತಿನಿಂದ ಒರಿಗೈಯನ್ನು ತೋರಿಸಿ, ಕೊಡದೆಕೊಳ್ಳದೆ 'ಥ್ಯಾಂಕ್‌ಯೂ' ಎಂದು ಹೇಳಿ ಅಟ್ಟಿದರು. ಪಾಪ! ಇವರಿಗೆ ಬಂದ ಯಾವದೋ ವಿಶ್ವಾಸವು ಬಹುದಿನಗಳ ಹಿಂದೆ ಉದಿಸಿರಬಹುದಾದ್ದರಿಂದ ಈಗ್ಗೆ ಪೂರ್ಣವಾಗಿ ನೆನಪಿನಲ್ಲುಳಿದಿರಲಿಕ್ಕಿಲ್ಲ! ಹಳೇ ಡಾಯರಿಗಳನ್ನೆಲ್ಲ ಹುಡುಕಾಡಿ ಹೇಳಬೇಕಾಗುತ್ತದೆಯೆಂದು ತೋರುತ್ತದೆ!! ಅದಕ್ಕೇ ಅವಕಾಶವಿರಲಿಕ್ಕಿಲ್ಲ!!!



# ೭. ಶಾಸ್ತ್ರಜಾಲ

ಸತ್ಸಂಗವನ್ನು ದೊರಕಿಸುವ ಆಸೆಯಂತೂ ಕಡಿದುಹೋಯಿತು. ಇನ್ನು ಭಗವತ್ಪ್ರಣೀತಗ್ರಂಥಗಳೆಂದು ಹೇಳಿಸಿಕೊಳ್ಳುವವುಗಳ ಸಹಕಾರವನ್ನಿಷ್ಟು ತೆಗೆದುಕೊಳ್ಳುವುದು ಉಳಿದಂತಾಯಿತು. ಯಾವ ದೇಶದಲ್ಲಿ ಹೋದರೂ ಜನರು ತಂತಮ್ಮ ಜನಾಂಗವನ್ನೇ ದೇವಜನಾಂಗವೆಂತಲೂ, ತಮ್ಮ ಪೂರ್ವಿಕರ ಧರ್ಮಗ್ರಂಥವನ್ನೇ ಭಗವತ್ಪ್ರಣೀತವೆಂತಲೂ, ಹೇಳಿಕೊಳ್ಳುತ್ತ ಅನ್ಯಜನರೊಡನೆ ಯಾವಾಗಲೂ ಗುದ್ದಾಡುತ್ತಿರುತ್ತಾರಷ್ಟೇ? ಒಟ್ಟಿಗೆ ಯಾವ ಧರ್ಮದ ಮೂಲಪುರುಷನೂ ದಿವ್ಯಜ್ಞಾನಕ್ಕೆ ಬಾರದೆ ತತ್ತ್ವಪ್ರಚಾರವನ್ನು ಮಾಡಲಾರನೆಂಬುದೇನೋ ನಿಜವಾದರೂ ಅವುಗಳ ನೆಲೆಯನ್ನು ಕಂಡುಹಿಡಿಯುವದು ಅಷ್ಟೊಂದು ಸುಲಭವಾದ ಕೆಲಸವಲ್ಲ. ಅದರಲ್ಲಿಯೂ ಸಾಧಕರಿಗಂತೂ ಇದು ಕುತ್ತಿಗೆ ಹಿಚುಕುವ ಕುತ್ತಾಗಿದೆ. ಕಾಲೇಜುಗಳಲ್ಲಿ ಲೆಕ್ಚರು ಹೇಳುವ ಪ್ರೊಫೆಸರುಗಳಿಗೆ ತುಲನಾತ್ಮಕ ತತ್ತ್ವಪರೀಕ್ಷಣವು ಸುಲಭವಾಗಿರಬಹುದು. ಯಾಕಂದರೆ, ಎಳ್ಳು ಕೊಂಡಂತೆ ಎಣ್ಣೆ ಮಾರುವ ವ್ಯಾಪಾರಿಗಳವರು! ಇಂಥಿಂಥ ಮತಗಳಲ್ಲಿ ಇಷ್ಟಿಷ್ಟು ಸಾಮ್ಯಗಳೂ, ಇಂತಿಷ್ಟು ವೈಷಮ್ಯಗಳೂ ಇರುವವೆಂದು ತೋರಿಸುತ್ತ ಹೊರಟರೆ ತೀರಿತು. ಸ್ವತಃ ನಿರ್ಲೇಪರು! ಆದರೆ ಸಾಧಕರ ಸ್ಥಿತಿ ಹೀಗಿರುವದಿಲ್ಲ. ಬೇರೆಬೇರೆ ಜ್ಞಾನಿಗಳು ಒಂದೇ ಮಾತಿನ ಬಗೆಗೆ, ಭಿನ್ನಾಭಿಪ್ರಾಯವುಳ್ಳವರಾಗಿದ್ದಾರೆಂದರೆ ಅವರ ಪ್ರಾಣ ಕುತ್ತಿಗೆಗೇ ಬಂತೆಂದು ತಿಳಿಯಬೇಕು! ಆದರೆ ಆ ಹಾದಿಗೇ ಹೋಗದವನಿಗೆ ಅದು ಪೂರ್ವದಿಕ್ಕಿಗಿದೆಯೆಂದರೂ ಅಷ್ಟೇ, ಪಶ್ಚಿಮದಿಕ್ಕಿಗಿದೆಯೆಂದರೂ ಅಷ್ಟೇ. ನಿಜಯಾತ್ರಿಕನಿಗೆ ಹೀಗೆ ಪಕ್ಕದಿಕ್ಕಿಗೆ ದಾರಿತೋರಿಸುವವರು ಗಂಟುಬಿದ್ದರೆ, ಎಂಥ ಉತ್ಪಾತವೆಂಬುದನ್ನು ಯೋಚಿಸಿದರೆ ತೀರೀತೇ?

ಇದಲ್ಲದೆ ಇನ್ನೊಂದು ತೊಡಕೇನಂದರೆ– ಸ್ವಧರ್ಮಗ್ರಂಥಗಳನ್ನು ಹೇಗೋ ನಿರಾಯಾಸದಿಂದ ಓದಬಹುದಾದರೂ ಅನ್ಯಧರ್ಮದ ಗ್ರಂಥಗಳ ವಿಶೇಷಾರ್ಥವನ್ನು ಓದಿ ತಿಳಿದುಕೊಳ್ಳುವದು– ಅಷ್ಟೊಂದು ಸುಲಭವಾದ ಕೆಲಸವಲ್ಲ. ಆದರೂ ಸತ್ಯಾನ್ವೇಷಿಗೆ ಈ ತಾಪವನ್ನು ತಪ್ಪಿಸಿಕೊಳ್ಳುವದಕ್ಕೆ ಸಾಧ್ಯವಿಲ್ಲ. ಅವನು ಎಲ್ಲವನ್ನೂ ಮುಟ್ಟಿಮುಟ್ಟಿ ಪರೀಕ್ಷಿಸಲೇ ಬೇಕಾಗುವದು. 'ಶತಪಥಬ್ರಾಹ್ಮಣ' 'ಹಳೇ ಒಡಂಬಡಿಕೆ' ಮುಂತಾದ ಆಚಾರಬಹುಳ ಗ್ರಂಥಗಳನ್ನು ಓದಿಮುಗಿಸುವದು, ದೃಢನಿಶ್ಚಯದ ಸಂಶೋಧಕರ ಹೊರತು ಪರಕೀಯರಾದ ಇನ್ನಾರಿಗೂ ಸಾಧ್ಯವಿಲ್ಲ. ಜೀವಕ್ಕೆ 'ಒಲ್ಲೆ ಒಲ್ಲೆ' ಎನಿಸಿಹೋಗುತ್ತದೆ. ಜ್ಞಾನಭಿಕ್ಷುವು ಇಂಥ ಪ್ರಕಾಂಡ ಕರ್ಮಕಾಂಡದ ಗ್ರಂಥಗಳನ್ನೂ ಕೂಡ, ಜೀವಕ್ಕೆ ಎಷ್ಟು ಒಲ್ಲೆನಿಸಿದರೂ ನಿರ್ವಾಹವಿಲ್ಲದೆ ತಲೆಕೆಡಿಸಿಕೊಂಡು, ಓದಹತ್ತಿದನು. 'ಮನವೇ, ನಿನಗೀಗ ಬೇಸರುಂಟಾಗುತ್ತಿರುವದು ಸಹಜವಾದರೂ– ಹಿಂದಿನಿಂದ ಅದರಲ್ಲಿ ಏನು ಹೇಳಿತ್ತೋ ಏನೋ ಎಂದು ಕುದಿಯುಂಟಾಗಬಾರದೆಂದು ಈಗ ನಿರ್ವಾಹವಿಲ್ಲದೆ ಓದಲೇ ಬೇಕಾಗಿದೆ. ನೆಲಹಿಡಿಯಬೇಡ ಏಳು ಏಳು" ಎಂದು ಹೇಳಿಕೊಳ್ಳುತ್ತ ಉತ್ಸಾಹವನ್ನು ಬಡಿದೆಬ್ಬಿಸಿ ಕೆಲಸಕ್ಕೆ ಹಚ್ಚುತ್ತಿದ್ದನು. ಅಂತೂ ಈತನು ಈಗ "ಮಯ್ಯೇವ ಮನ ಆಧತ್ಸ್ವ"ದ ನಾಡನ್ನು ದಾಟಿ, "ಮಯಿ ಬುದ್ಧಿಂ ನಿವೇಶಯ"ಕ್ಕೆ ಬಂದು ಸೇರಿದನು.

ನಮ್ಮ ನಾಯಕನು ಎಷ್ಟು ಕಷ್ಟಪಟ್ಟರೂ 'ತಾಳಮರಕ್ಕೆ ಆಶೆ ಮಾಡಿ, ಮೇಲೆ ನೋಡಿ, ಗೋಣುನೊಂದಂತೆ' ಆಗಹತ್ತಿತಲ್ಲದೆ ಫಲವೆಂಬುದೇ ಕಾಣದಂತಾಯಿತು. ಬಾಯ್ಬಲೂ, ಕುರಾನವೂ ದೇವರಿದ್ದಾನೆಂದು ಘಂಟಾಘೋಷವಾಗಿ ಹೇಳಿದರೆ, ಜೈನಬೌದ್ಧಗ್ರಂಥಗಳು ಸೃಷ್ಟಿಕರ್ತನನ್ನು ಎಳ್ಳಷ್ಟೂ ಒಪ್ಪಿಕೊಳ್ಳುವದಿಲ್ಲ. ಆರ್ಯಗ್ರಂಥಗಳಲ್ಲಿ ಜನ್ಮಾಂತರದ ವಿಷಯವು ಪ್ರತಿಪಾದಿಸಲ್ಪಟ್ಟರೆ, ಪಶ್ಚಿಮದ ಗ್ರಂಥಗಳಲ್ಲಿ ಅದರ ವಾಸನೆ ಕೂಡ ಇರುವದಿಲ್ಲ. ಒಂದು ಗ್ರಂಥವು, ಸರ್ವಕಾಲಿಕ

ನಾದ ದೇವನಿದ್ದಾನೆಂದು ಒಪ್ಪಿಕೊಂಡರೆ, ಇನ್ನೊಂದರಲ್ಲಿ- ಮನು ಷ್ಯನ ಆತ್ಮವೇ ಆತನಾಗಿದೆಯಲ್ಲದೆ ಉಳಿದ ದೇವರುಗೀವರುಗಳ ಅಸ್ತಿತ್ವಕ್ಕೆ ಆಶ್ರಯ-ವೇ ಇರುವದಿಲ್ಲ. ಒಂದು ದರ್ಶನಗ್ರಂಥವು 'ಈಶ್ವರ ಪ್ರಣಿಧಾನ'ವನ್ನು ಒಪ್ಪಿಕೊಳ್ಳುವದಾದರೆ, ಇನ್ನೊಂದು ಪ್ರಮಾಣಗಳಿಲ್ಲದ ಮೂಲಕ ದೇವರನ್ನು ಒಪ್ಪಲಾಗುವದಿಲ್ಲವೆನ್ನುತ್ತದೆ. ಇಂಥ ಪರಸ್ಪರವಿರೋಧವಾಗಿರುವ ಅಭಿಪ್ರಾಯಗಳಲ್ಲಿ ಯಾವುದನ್ನು ಸತ್ಯವೆಂದು ಹೇಳಲಿಕ್ಕಾದೀತು? ಇನ್ನು ಯಾವುದನ್ನು ಅಸತ್ಯವೆಂದು ಹೇಳಲಿಕ್ಕಾದೀತು?? ಒಂದನ್ನು ಸತ್ಯವೆಂದು ಗ್ರಹಿಸಿದೆವಾದರೆ ಇನ್ನೊಂದನ್ನು ಅಸತ್ಯವೆಂದೊಪ್ಪಲೇ ಬೇಕಾಗುವದು. ಆದರೆ ಹೀಗೆ ಮಾಡಲಿಕ್ಕೆ ನಮಗೇನು ಆಧಾರವಿದೆ?ಒಂದು ದೇಶದ ಶಾಸ್ತ್ರವು ಸತ್ಯವಾದರೆ ಇನ್ನೊಂದು ದೇಶದ್ದು ಯಾಕೆ ಸತ್ಯವಲ್ಲಾ? ಒಂದು ಮತದವರ ಗ್ರಂಥವು ದಿಟವಾಗಿದೆಯಾದರೆ, ಅನ್ಯಮತದವರದೇಕೆ ಸಟಿಯಾಗಿರಬೇಕು? ಎಲ್ಲ ತತ್ತ್ವಗಳಿಗೂ ಮೂಲದಲ್ಲಿ ದ್ರಷ್ಟಾರರಿದ್ದಾರೆ; ಮುಂದೆ ಅದನ್ನನುಸರಿಸಿ ಗತಿಗಂಡೆವೆಂದು ಹೇಳಿದ ಸಾಧಕರು ಕಾಲಕಾಲಕ್ಕೆ ಆಗಿಹೋಗಿದ್ದಾರೆ; ಅಲ್ಲದೆ- ಅದು ತಮ್ಮ ಬುದ್ಧಿಗೆ ಸರಿಯೆನಿಸಿದೆಯೆಂದು ಯುಕ್ತಿಪ್ರಯುಕ್ತಿಗಳಿಂದ ಸಿದ್ಧಪಡಿಸಿದ ಮೇಧಾವಿಗಳೂ ಪ್ರತಿಯೊಂದು ಶಾಖೆಯಲ್ಲಿ ಇದ್ದೇ ಇದ್ದಾರೆ. ಹೀಗೆಂದ ಬಳಿಕ ಒಬ್ಬರದನ್ನು ಸತ್ಯವೆಂದೂ ಇನ್ನೊಬ್ಬರದನ್ನು ಅಸತ್ಯವೆಂದೂ ಹೇಳಲಿಕ್ಕೆ ನಮಗೆ ಅಧಿಕಾರವೇನಿದೆ? 'ಅದೂ ಸತ್ಯ-ಇದೂ ಸತ್ಯ' ಎನ್ನುವೆವಾದರೆ ಮನವು ಸಹಸಾ ಒಪ್ಪದು. ಯಾಕೆಂದರೆ ಒಂದು ಪೂರ್ವ, ಇನ್ನೊಂದು ಪಶ್ಚಿಮ. ಸತ್ಯವನ್ನು ಹೀಗೆ ಉಭಯವಿಧವಾಗಿ ಪ್ರತಿಪಾದಿಸಹತ್ತಿದರೆ ಸತ್ಯಾನ್ವೇಷಿಯಾದ ಸಾಧಕನ ಸ್ಥಿತಿಯು ದಿಕ್ಕುಗೆಟ್ಟು ಹೋಗುತ್ತದೆ. ಗೀತೆಯಲ್ಲಿ ಇಂಥ ಉಭಯಸಂಕಟಕ್ಕೀಡಾದ ಅರ್ಜುನನು ಭೀತನಾಗಿ—

" ವ್ಯಾಮಿಶ್ರೇಣೇವ ವಾಕ್ಯೇನ ।
ಬುದ್ಧಿಂ ಮೋಹಯಸೀವ ಮೇ ॥
**ತದೇಕಂ ವದ ನಿಶ್ಚಿತ್ಯ ॥**
ಯೇನ ಶ್ರೇಯೋऽಹಮಾಪ್ನುಯಾಂ ।। "

" ಮಿಶ್ರವಾದ ವಾಕ್ಯಗಳಿಂದ ನನ್ನ ಬುದ್ಧಿಯನ್ನು ಭ್ರಮೆಯಲ್ಲಿ ನೂಕುವಿಯಲ್ಲ ! ಯಾವುದರಿಂದ ನನಗೆ ಕಲ್ಯಾಣವಾದೀತೋ ಅಂಥ **ಏಕಮಾತ್ರವಾದ ನಿಶ್ಚಿತ ಸತ್ಯವನ್ನು ಹೇಳು !!** " ಎಂದು ಗೋಳಿಡುವುದನ್ನು ನೋಡಿದರೆ, ಸಾಧಕಜೀವನದ ಈ ಸಂಕಟದ ಕಲ್ಪನೆಯಾಗದಿರದು.

ಉಪನಿಷತ್ತುಗಳು ಹಿಂದುಸ್ಥಾನದ ಜ್ಞಾನದ ಕಣಿಯಾಗಿವೆಯಷ್ಟೇ ? ಜ್ಞಾನಬಲದ ಮುಂದೆ ಸರ್ವಬಲಗಳೂ ಕ್ಷುದ್ರ ತೃಣಗಳೆಂದು ಆ ಗ್ರಂಥಗಳಲ್ಲಿ ಸ್ಪಷ್ಟವಾಗಿ ತೋರಿಸಲಾಗಿದೆಯಲ್ಲವೇ ? ಆದರೆ ಇಂಥ ಜ್ಞಾನನಿಷ್ಠ ಮುನಿಗಳೂ ಕೂಡ ಸಾಂಸಾರಿಕ ವಿಘ್ನಗಳ ನಿವಾರಣೆಗಾಗಿ ಚೇಡಿ, ಮಾಟ, ಜಾರಣ, ಮಾರಣಗಳನ್ನು ಅವಲಂಬಿಸಿ ಕುಳಿತಿದ್ದರೆಂಬುದು ಗೊತ್ತಾದರೆ, ಸಾಧಕಜೀವಿಗೆ ಎಷ್ಟು ಕಳವಳವಾಗಬೇಡ ? !!! ಬೃಹದಾರಣ್ಯಕೋಪನಿಷತ್ತಿನ ಕೊನೆಯ ಅಧ್ಯಾಯದಲ್ಲಿ ಬರುವ ವಿಘಾತಕವಿದ್ಯೆಗಳ ವಿಧಿನಿಯಮಗಳನ್ನೋದಿದಾಗ ನಮ್ಮ ನಾಯಕನು ಹತಬುದ್ಧಿಯುಳ್ಳವನಾದನು.

ಹಜರತ್ ಮಹಮ್ಮದ ಪೈಗಂಬರರಿಗೆ ಒಬ್ಬ ಸೊಕ್ಕಿನವನು ಸಂತಾನಗೇಡಿಯೆಂದು ಚುಚ್ಚಿಮಾತಾಡಿದಾಗ, - ಅವರು ಜೀವಕ್ಕೆ ಹಚ್ಚಿಕೊಂಡು ವ್ಯಸನಪಡುತ್ತಿರಲು, ದೇವದೂತನ ಮುಖಾಂತರವಾಗಿ- " ಎಲೈ ಪೈಗಂಬರನೇ, ವ್ಯಥಿತನಾಗಬೇಡ, ಆತನೇ ಸಂತಾನಗೇಡಿಯಾಗಿ ಹೋಗುವನು " ಎಂದು ಪರಮಾತ್ಮನು ಸಂತೈಸಿದನೆಂದು ಕುರಾನದಲ್ಲಿ ಹೇಳಿರುವದನ್ನು ನೋಡಿದರೆ ಏನು ಅನಿಸಬಹುದು ? !

ಅಂಥಾ ಸಾಕ್ಷಾತ್ಕಾರೀ ಪುರುಷನಿಗೂ ಇಷ್ಟೊಂದು ಸಣ್ಣ ಮಾತಿಗಾಗಿ ಅಂಥಾ ಮನೋವ್ಯಸನವೇ? ಅದರಲ್ಲಿಯೂ ಲೋಕಪಿತನಾದ ದೇವರು, ಪ್ರತಿಪಕ್ಷಿಯ ಕೇಡನ್ನು ಸೂಚಿಸಿ, ಸಮಾಧಾನಪಡಿಸುವದನ್ನು ನೋಡಿದರೆ, ನಮ್ಮ ನಾಯಕನ ಸ್ಥಿತಿಯು ಏನಾಗಿರಲಿಕ್ಕಿಲ್ಲ!

ಬಾಯ್ಬಲ್ಲಿನಲ್ಲಿ— ಪರಂಪರಾಪ್ರಿಯರಾದ ಜನರು ಕ್ರಿಸ್ತನನ್ನು ರಾಜಸಭೆಗೆಳೆದು, ಕೊಲ್ಲಿಸಬೇಕೆಂದು ಹೊಂಚು ಹಾಕಿ, ಆತನನ್ನು ಹಿಡಿಯಬೇಕೆಂದು ಗೊತ್ತು ಮಾಡಿದ ದಿವಸದ ರಾತ್ರಿಯಲ್ಲಿ, ಆ ಪರಮಸಿದ್ಧ ಪುರುಷನು, ಊರ ಹೊರಗೆಬಂದು, ಒಂದು ಬಂಡೆಗಲ್ಲ ಮೇಲೆ ಬಿದ್ದುಕೊಂಡು— "ಪ್ರಾಣದಲ್ಲಿ ಕಸವಿಸಿಯಾಗುತ್ತಿದೆಯಲ್ಲಾ! ಅಯ್ಯೋ ಜೀವಕ್ಕೆ ಸಮಾಧಾನವಿಲ್ಲದಂತಾಯಿತಲ್ಲಾ!! ತಂದೇ, ನನಗೆ ಒಂದಿರುವ ಈ ಗಳಿಗೆಯನ್ನು ತಪ್ಪಿಸಲಾರೆಯಾ?!!!" ಎಂದು ಮೂರು ಸಾರ ತಳಮಳಿಸಿ ಅಳುತ್ತಾನೆ. ಅಹಾ! "ಅಲ್ಪವಿಶ್ವಾಸಿಗಳೇ!" "ಸತ್ಯಸತ್ಯವಾಗಿ ಹೇಳುತ್ತೇನೆ!!" "ದೇಹವನ್ನು ಕೊಲ್ಲುವವರಿಗೆ ಹೆದರಬೇಡಿರಿ!!!" ಎಂದು ಜೀವಮಾನದಲ್ಲೆಲ್ಲಾ ಗುಡುಗುಹಾಕಿದ ಹುಲಿಯು, ತನ್ನ ಕೊನೆಯ ಗಳಿಗೆಯಲ್ಲಿ ಹೀಗೆ ಗೋಳಾಡುತ್ತಿರುವದನ್ನು ನೆನೆದರೆ, ಯಾವ ಭಕ್ತಸಾಧಕನ ತಲೆ ಸೀಳಿ ಹೋಳಾಗಲಿಕ್ಕಿಲ್ಲ!!!? ಇಂಥಿಂಥ ಮಹಾಪುರುಷರಿಗೇ ಎಡರು ಒಂದಾಗ ತಮ್ಮ ವಾಕ್ಯಗಳ ಉಪಯೋಗವು ತಮಗೇ ಇಲ್ಲದಂತಾದದ್ದನ್ನು ನೋಡಿದರೆ ಉಳಿದವರ ಪಾಡು ಏನಾಗಬೇಕು?! ಹೊತ್ತು ಬಂದಾಗ ಹಿಂದೆ ಸರಿದುಬಿಡುವ ಜ್ಞಾನವನ್ನು ನಿಜವಾದ ಜ್ಞಾನವೆಂದಾದರೂ ಜೀವವು ಹೇಗೆ ಒಪ್ಪಿಕೊಳ್ಳಬೇಕು?! ಜ್ಞಾನರಾಜ್ಯದ ನೆಲೆಗಟ್ಟನ್ನು ನಿಲ್ಲಿಸಿದವರಲ್ಲೇ ಇಂಥ ವಿಪರೀತಗಳು ಕಾಣಿಸಿದರೆ, ಆ ಹಾದಿಯನ್ನು ಸತ್ಯವೆಂದಾದರೂ ಒಪ್ಪಿಕೊಳ್ಳುವದಕ್ಕೆ ಮನವು ಹೇಗೆ ಸಿದ್ಧವಾದೀತು?

ಇನ್ನೇನು? ನಮ್ಮ ನಾಡಿನಲ್ಲಿರುವ ವೇದಾಂತಿಗಳೆಂಬವರೆಲ್ಲರೂ

**ನಿಜಗುಣ ಶಿವಯೋಗಿಗಳೆಂದರೆ**- ತ್ರಿಕಾಲದರ್ಶಿಗಳಾದ ಸರ್ವಜ್ಞರೆಂದೇ ತಿಳಿದುಕೊಂಡಿದ್ದಾರಲ್ಲವೇ? ಅವರ ವಾಕ್ಯವೆಂದರೆ ಇವರಿಗೆ ಶೈಲಾಕ್ಷರಗಳೇ ಸರಿ! ಆದರೆ ಇಂಥ ದಿವ್ಯಜ್ಞಾನಿಗಳು ತಮ್ಮ ವಿವೇಕ ಚಿಂತಾಮಣಿಯೆಂಬ ಗ್ರಂಥದಲ್ಲಿ ಹೇಳಿದ ಜೈನಧರ್ಮದ ತೀರ್ಥಂಕರರ ವಿಷಯವನ್ನು ನೋಡಿದರೆ ನಗಬೇಕೋ ಅಳಬೇಕೋ ತಿಳಿಯದು!

"ಹೇಮಚಂದ್ರ, ನಾಗಚಂದ್ರ, ನೇಮಿಚಂದ್ರ, ಮೇಘಚಂದ್ರ, ಮಾಘಚಂದ್ರ, ಆರ್ಯತಾ, **ಆದಿನಾಥ**, ಅಗ್ಗಳ, **ಪಾರ್ಶ್ವನಾಥ**, ಸೌಗತ, ಶ್ರುತಕೀರ್ತಿ, ಶ್ರೀಮತಿ, ಕಾಮರಹಿತ, **ಮುನಿಸ್ವಾಮಿಗಳೆಂಬ ಚತುರ್ದಶ** ತೀರ್ಥಂಕರರಿಹರು" ಇಲ್ಲಿ ಹೇಳಿದ ಹೆಸರುಗಳಲ್ಲಿ ಸರಿಯಾಗಿರುವುದು ಎರಡು ಮೂರು ಮಾತ್ರವೇ ಉಳಿದವರು ತೀರ್ಥಂಕರರೇ ಅಲ್ಲ. ಕವಿಗಳೋ, ಪಂಡಿತರೋ, ಕೆಲವರು ಕಲ್ಪಿತರೋ ಆಗಿದ್ದಾರೆ! ಇಷ್ಟು ಅಲ್ಲದೆ ಅವರ ಸಂಖ್ಯೆ ಹದಿನಾಲ್ಕೆಂಬುದು ಶುದ್ಧ ತಪ್ಪು!! ಇಪ್ಪತ್ನಾಲ್ಕರೆಂಬುದು ಸರ್ವಶ್ರುತವಾಗಿದ್ದರೂ ನಮ್ಮ ದಿವ್ಯಜ್ಞಾನಿಗಳ ಕಿವಿಗೆ ಒಳಿಗ ಹತ್ತು ಕೇಳಿಸಲೇ ಇಲ್ಲ! ಜನರೆಲ್ಲ ಏಕಕಂಠವಾಗಿ ಮಹಾಜ್ಞಾನಿಗಳೆಂದು ಹೇಳುತ್ತಿರುವವರಲ್ಲೇ ಇಂಥಾ ಅಕ್ಷಮ್ಯ ಪ್ರಮಾದಗಳು ಕಾಣಹತ್ತಿದ ಮೇಲೆ, ಸತ್ಯಾನ್ವೇಷಿಗಳ ಮತಿಯು ಇದನ್ನು ನೋಡಿ, ಭ್ರಮಿಸಿಹೋಗುವದರಲ್ಲೇನಾಶ್ಚರ್ಯ?!!



# ಪೂರ್ವರಂಗ



೧

## ಸಮನ್ವಯಖಂಡ

ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷ್ಯತೇ ।
**ಅವಿಭಕ್ತಂ ವಿಭಕ್ತೇಷು** ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥
ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ॥

"ಬಿಡಿಯಲ್ಲಿ ಇಡಿಯನ್ನು ಕಾಣುವದು ಸಾತ್ತ್ವಿಕಜ್ಞಾನ. ಅವರವರ ಪ್ರಕೃತಿಯಂತೆ ಅವರವರ ಶ್ರದ್ಧೆಯಿರುತ್ತದೆ."

—ಗೀತೆ

# ೮. ಭ್ರಮಶೋಧನ.

ಹಳ್ಳಿಪಳ್ಳಿಗಳಲ್ಲಿ ಜನರು ತಮ್ಮ ವಿಶ್ರಾಂತಿಕಾಲದಲ್ಲಿ ನಡಿಸುತ್ತಿರುವ ಬಗೆಬಗೆಯ ಮನೋರಂಜನಗಳಲ್ಲಿ ಗುಟ್ಟಿನ ಬಲೆಗಳನ್ನು ಕಲ್ಪಿಸುವದೂ ಒಂದಾಗಿದೆಯಲ್ಲವೇ? ಸಾಧಾರಣವಾಗಿ ದಾರ, ಕಟ್ಟಿಗೆ, ಬಳೆ ಮುಂತಾದವುಗಳನ್ನು ವಿಚಿತ್ರರೀತಿಯಿಂದ ಒಂದರೊಳಗೊಂದು ಸೇರಿಸುವದುಂಟು. ದಾರವನ್ನು ಹರಿಯದೆ, ಕಟ್ಟಿಗೆಯನ್ನು ಮುರಿಯದೆ, ಬಳೆಗಳನ್ನು ಒಡೆಯದೆ ಇದ್ದಕ್ಕಿದ್ದಂತೆ ಬಿಡಿಸಿತೋರಿಸಿರೆಂದು ಪಂಥ ಹಾಕಿ ಜನರೊಳಗಿರುತ್ತಿರುತ್ತಾರೆ. ಆಗ ನೋಡಿದವರೆಲ್ಲ ಅದನ್ನು ಆಗದ ಮಾತೆಂದೇ ಹೇಳಿಬಿಡುವರಲ್ಲವೇ? ಎಷ್ಟು ನಿರೀಕ್ಷಿಸಿದರೂ ಹಾಗೆ ಮಾಡುವದಕ್ಕೇ ಸಾಧ್ಯವೆನಿಸುವದಿಲ್ಲ. ಅದೊಂದು ಆಗಲಾರದ "ಕುಬಂಧ" ವೆಂದೇ ಅಂದು ಬಿಡುವೆವು. ಆದರೆ ಹಿಂದೆ ಎಂದಾದರೂ ಆ ಜಾತಿಯ ಒಂದೆರಡು ಬಲೆಗಳನ್ನು ಬಿಡಿಸಿದ್ದು ಗೊತ್ತಿದ್ದರೆ, ಅಂಥವರು ದೀರ್ಘವಾಗಿ ಆಲೋಚಿಸಿ ಅದರ ಯುಕ್ತಿಯನ್ನು ಕಂಡುಹಿಡಿಯಬಲ್ಲರು. ಇಲ್ಲದಿದ್ದರೆ ಅದು ಬಹುದಿವಸಗಳ ವರೆಗೆ ಕುಬಂಧವಾಗಿಯೇ ಉಳಿದು ಬಿಡುವದು. ತತ್ತ್ವವಿಚಾರದಲ್ಲೂ ಹೀಗೇ ಇದೆ. ತತ್ತ್ವದ ಮಾತುಗಳೆಲ್ಲಾ ಈ ಬಲೆಗಳಿಗಿಂತ ಬಿಗಿಯಾದ ಬಂಧಗಳಾಗಿವೆಯೆಂದು ಹೇಳಬಹುದು. ಇವುಗಳ ಪಟ್ಟಪರಿಚಯವು ಬೆಳೆಯದೆ ಇವು ಬಿಚ್ಚಲಾರವು.

ಈಗ ಗೆರೆಗಳಿಂದ ತೆಗೆದ ಡ್ರಾಯಿಂಗುಗಳನ್ನು ಒಬ್ಬ ಅಶಿಕ್ಷಿತ ಮನುಷ್ಯನು ನೋಡುತ್ತಿದ್ದಾನೆಂದು ತಿಳಿದರೆ ಪೆಟ್ಟಿಗೆಯ ಚಿತ್ರವು ಅವನಿಗೆ ಒಳಗೆ ಗೀಚುಗಳುಳ್ಳ ಷಟ್ಕೋಣಾಕಾರದೊಂದು ಭೂಮಿತಿಯ ಆಕೃತಿಯಂತೆ ಕಾಣಿಸುತ್ತದೆ. ಚಿತ್ರಕಲೆಯೊಳಗಿನ ಛಾಯಾಪ್ರಕಾಶಗಳ ಕಲ್ಪನೆಯಿಲ್ಲದವರು ಮನುಷ್ಯಚಿತ್ರವನ್ನು ನೋಡಿ

"ಮುಖಕ್ಕೆ ಅಲ್ಲಲ್ಲಿ ಕಾಡಿಗೆಯನ್ನೇಕೆ ಬಳಿದುಕೊಂಡಿದ್ದಾನೆ?" ಎಂದು ಕೇಳುತ್ತಿರುವದು ಅರಿದಲ್ಲ. ಚಿತ್ರದಲ್ಲಿಯ ರತ್ನಗಂಬಳಿಯ ಇದಿರಿನ ಅಂಚು ಅಗಲವಾಗಿಯೂ, ಆಚೆಗಿನ ಸೆರಗು ಹತ್ತಿರವಾಗಿಯೂ ಇರುವದನ್ನು ನೋಡಿ "ಅದೆಂಥಾ ಅಡ್ಡಕಸಬಿನ ನೇಕಾರನು ನೇಯ್ದಿರುವನೋ?" ಎಂದು ಸಹಜವಾಗಿ ಆಡಿಬಿಡಬಹುದು. ದೃಶ್ಯವಸ್ತುಗಳನ್ನು ರೇಖಾಮಾತ್ರಗಳಿಂದ ದೃಗ್ಗೋಚರಗೊಳಿಸಬೇಕಾಗಿ ಬಂದಾಗ ಚಿತ್ರಕಾರನಿಗೆ ಎಂಥ ಸಂಕಟ ಬರುವದೆಂಬದನ್ನು ಉಳಿದವರೇನು ಬಲ್ಲರು? ಅನಿರ್ವಚನೀಯವನ್ನು ಶಬ್ದಸಾಧನದಿಂದ ಹೃದಯಂಗಮಗೊಳಿಸುವವನಿಗೆ ಅದಕ್ಕಿಂತ ಅಸಂಖ್ಯಪಟ್ಟು ಕಷ್ಟವಿದೆಯೆಂಬುದು ಅನ್ಯರಿಗೇನು ಗೊತ್ತಿದ್ದೀತು! ರೂಪಿಸುವವನಿಗೊಂದು ಕೌಶಲ್ಯ ಬರಬೇಕಾದಂತೆ, ಅದನ್ನು ನೋಡುವವನಿಗೂ ಅಂಥದೊಂದು ಕೌಶಲ್ಯವು ಬಾರದಿದ್ದರೆ ಪ್ರಯೋಜನವಿಲ್ಲವೆಂಬದು ಸ್ಪಷ್ಟವಾಗಿದೆ. "ಯೋಗಃ ಕರ್ಮಸು ಕೌಶಲಂ." ಆದರೆ ಆ ಕೌಶಲ್ಯವು ಬೇಕೆಂದ ಗಳಿಗೆಯಲ್ಲಿ ಬಂದೇ ತೀರುವಂತಹದೇ? ಬಳಕೆ ಬೆಳೆದಲ್ಲದೆ ಅದು ಬಾರದು. ಸತತ ಅನುಸಂಧಾನದಿಂದ ಕುಶಲತೆಯು ಪ್ರಕಟವಾಗುವದು. ಈ ವಿಷಯಕ್ಕೆ ಗೀತೆಯಲ್ಲಿ—

"ತೇಷಾಂ **ಸತತ** ಯುಕ್ತಾನಾಂ
ಭಜತಾಂ ಪ್ರೀತಿಪೂರ್ವಕಂ ॥
ದದಾಮಿ **ಬುದ್ಧಿಯೋಗಂ** ತಂ
ಯೇನ ಮಾಮುಪಯಾಂತಿ ತೇ ॥"

"ಪ್ರೇಮಪೂರ್ವಕವಾದ ಭಕ್ತಿಯುಳ್ಳವರಾಗಿ **ಸದಾಸರ್ವದಾ** ನನ್ನಲ್ಲಿ ತನ್ಮಯರಾದರೆ, ನನ್ನನ್ನು ಪಡೆಯಲಿಕ್ಕೆ ಬೇಕಾಗುವ ಬುದ್ಧಿಯೋಗವನ್ನು ನಾನವರಿಗೆ ಕೊಡುವೆನು" ಎಂದು ಹೇಳಿದೆ.

ಜ್ಞಾನಭಿಕ್ಷುವಿಗೆ ಇದೀಗ ಇಪ್ಪತ್ತುಮೂರನೇ ವರುಷ.

ಇದುವರೆಗೆ ಈತನು ಓದುತ್ತಿದ್ದ ಉದ್ಗ್ರಂಥಗಳೆಲ್ಲಾ ದೇಶಭಾಷೆಯ ಅನುವಾದಗಳೇ ಆಗಿದ್ದವು. ಆದುದರಿಂದ ಈತನಿಗೆ ಒಳಗೊಳಗೆ ಅನಿಸ ಹತ್ತಿದ್ದೇನಂದರೆ-ಅನುವಾದಕರು ಮೂಲಗ್ರಂಥಕಾರರ ಭಾವಗಳನ್ನು ಎಷ್ಟರಮಟ್ಟಿಗೆ ಗ್ರಹಿಸಿದ್ದಾರು??? ಅವರಿಂದೇನಾದರೂ ಪ್ರಮಾದ ಗಳಾಗಿರಲಿಕ್ಕಿಲ್ಲವೇ? ಸೂಕ್ಷ್ಮ ಅನುಭವಪೂರ್ಣಗ್ರಂಥಗಳ ಮೂಲ ಭಾವದ ಸಮಗ್ರದರ್ಶನವನ್ನು ಅನುವಾದಕರು ಪಡೆದಿರಬಲ್ಲರೇ? ಅಥವಾ ಅವರು ಮೂಲವನ್ನು ವಿಸ್ತರಿಸಿಯಾಗಲಿ ಸಂಕ್ಷೇಪಿಸಿಯಾ ಗಲಿ ಕೆಡಿಸಿರಲಾರರೇ? ಏನಾದರೂ ಆಗಲಿ, ಮೂಲಕ್ಕೇ ಮುಟ್ಟಿ ನೋಡೋಣ. ಒಂದೊಂದು ಶಬ್ದದಲ್ಲಿಯೂ ಕೂಡ ಒಮ್ಮೊಮ್ಮೆ ಬಹಳ ಮಹತ್ತ್ವವು ಮುಚ್ಚಿಯಾಗಲಿ ಬಿಚ್ಚಿಯಾಗಲಿ ಹೋಗಬಹು ದಾಗಿದೆ. ಈಗ ಅರವಿಂದರ ಗ್ರಂಥಗಳ ವಿಷಯದಲ್ಲಿರುವ ನನ್ನ ಸಂದೇ ಹವನ್ನು ನಿವಾರಿಸಿಕೊಳ್ಳಲಿಕ್ಕೆ ಒಂದೇ ಒಂದು ಶಬ್ದದ ಅಗತ್ಯವು ಕೂಡ ಅತಿಶಯವಾಗಿದೆ. ಈ ಮೊದಲು ಅವರ ಗ್ರಂಥಗಳಲ್ಲಿ ಲಕ್ಷ್ಯಕ್ಕೆ ಬಂದ ಆ ವಿರಮವಾಕ್ಯಗಳಿಂದ ಒಳಗೊಳಗೇ ಒಂದು ವಿಷಯವು ಏಳುಬೀಳುತ್ತಾ ಇದೆ. ಕಾಣಲಾರನೆಂದು ಹೇಳಿದ ಅವರ ದೇವರ ವ್ಯಾಖ್ಯೆಯಾದರೂ ಏನಿರಬಹುದು? ಕೋಟಿಜನ್ಮ ತಲೆಗಟ್ಟಿಸಿಕೊಂ ಡರೂ ಕಾಣಲಾರನೆಂದು ಹೇಳಿದ್ದಾರಲ್ಲವೇ? ದೇವರೆಂಬವನು ಅಂಥ ನಿರ್ದಯನಾಗಿರಬಹುದೇ? ಅಲ್ಲದೆ "ದೇವರೆಂದರೇನೆಂಬ ಅಗತ್ಯವಿಲ್ಲ" ವೆನ್ನುತ್ತಾರಷ್ಟೆ. ಜೈನರೂ ಬೌದ್ಧರೂ ಕರ್ಮಕ್ಷಯವಾದ ಒಳಿಕ ಮನುಷ್ಯನೇ ದೇವರಾಗುತ್ತಾನೆಂದು ಹೇಳುತ್ತಿದ್ದಾರಲ್ಲ-ಅರವಿಂದರೂ ಅದನ್ನೇ ಆಡಿತೋರಿಸುತ್ತಿರಬಹುದೇನು? ಹೀಗಿದ್ದರೆ ಅವರು ಹಾಗೆ ಹೇಳುವದು ಸರಿಯಾದೀತು. ಯಾಕೆಂದರೆ ನಾವೇ ಎಂದಾದರೂ ದೇವ ರಾಗುವವರಿದ್ದುದಾದರೆ ನಮ್ಮ ಮುಂದೆ ನಾವೇ ತಲೆಗಟ್ಟಿಸಿಕೊಳ್ಳು ವದು ಅಪಹಾಸ್ಯಕರವೆಂಬುದೇನೋ ನಿಜ. ವೇದಾಂತಿಗಳೂ ಹೀಗೆಯೇ

"ತನ್ನ ಬಿಟ್ಟು ಇನ್ನಾವ ದೇವರುಂಟೋ?" ಎಂದು ಹೇಳುತ್ತಿರುತ್ತಾರಲ್ಲವೇ? ಪರ್ಯಾಯಬಂದ ಅರವಿಂದರೂ ಇದನ್ನೇ ಪ್ರತಿಪಾದಿಸುತ್ತಿರಬಹುದೇನು? ಅವರು "ದೇವರು" ಎಂಬ ಶಬ್ದಕ್ಕೆ ತಮ್ಮ ಮೂಲಗ್ರಂಥಗಳಲ್ಲಿ ಯಾವಶಬ್ದವನ್ನು ಉಪಯೋಗಿಸಿದ್ದಾರೆಯೋ ನೋಡಿದರೆ ತಿಳಿಯುವದು. ಅನುವಾದಕರಾದರೋ 'ಪರಮಾತ್ಮ' ಎಂಬ ಶಬ್ದವನ್ನು ತಮ್ಮ ಪುಸ್ತಕದಲ್ಲಿ ಬಳಸಿದ್ದಾರೆ. "ಪರಮ" ವೆಂದರೆ "ಎಲ್ಲಕ್ಕೂ ಮೇಲಿನದು–ಹೆಚ್ಚಿನದು" "ಆತ್ಮ" ವೆಂದರೆ ನಮ್ಮೊಳಗೇ ಇರುವ "ನಮ್ಮ ನಿಜಸ್ಥಿತಿಯು." ಇದರ ಮೇಲಿಂದ "ಪರಮಾತ್ಮ" ಎಂದರೆ ನಮ್ಮ ನಿಜಸ್ಥಿತಿಯದೇ ಒಂದು ತೀರಹೆಚ್ಚಿನ ಅವಸ್ಥೆಯು. ಅರವಿಂದರು ಹೀಗೇನಾದರೂ ಉಪಯೋಗಿಸಿರಬಹುದೇ? ಹೀಗಿದ್ದುದಾದರೆ ನನ್ನ ಬಳ ಆಶೆಗೇನೂ ತೃಪ್ತಿಯಿಲ್ಲವಾದರೂ ಅವರ ವಾಕ್ಯಕ್ಕಾದರೂ ಸರಿಯಾದ ಅರ್ಥವು ಹತ್ತಿದಂತಾಗುತ್ತದೆ. ಅರವಿಂದರ ಇಡಿಯ ಪುಸ್ತಕದ ವಿಚಾರವನ್ನು ನೋಡಿದರೆ ಅವರು ಇಂಥಾ ಪರಮಾತ್ಮನ ವಿಷಯವಾಗಿ ಬೋಧಿಸಿರಲಾರರೆಂದು ಅನಿಸುತ್ತದೆ. ಜಗದ್ವ್ಯಾಪಿಯಾದ, ಜಗತ್ಪಾಲಕನಾದ ಪರಮಾತ್ಮನಿಗೆ ನಾನು ದೇವರೆಂದು ಎನ್ನುತ್ತಿದ್ದು ಅವನನ್ನೇ ಆಶಿಸುತ್ತಿರುವೆನಾದ್ದರಿಂದ ಅರವಿಂದರ ತದ್ವಿಪರೀತವ್ಯಾಖ್ಯೆಯು ಸಂಭವನೀಯತೆಗೆ ಬೆದರಿದ್ದೇನಲ್ಲವೇ? ನಿಜವಾಗಿಯೂ ಅರವಿಂದರ ಅಭಿಪ್ರಾಯವು ಏನಿದ್ದಿತು? ಇದಕ್ಕೀಗ ಒಂದೇ ಉಪಾಯವೆಂದರೆ–ಅವರ ಮೂಲ ಇಂಗ್ಲಿಷಗ್ರಂಥಗಳನ್ನೇ ಶಬ್ದಶಃ ಪರಿಶೀಲಿಸಬೇಕು.

ಆದರೆ ನಮ್ಮ ನಾಯಕನಿಗೆ 'ಪ್ರಾಯ್ಮರ್'ಕ್ಕಿಂತ ಹೆಚ್ಚಿನ ಭಾಷಾಪರಿಚಯವಿಲ್ಲ!! ಆದರೂ ಮಹಾಗ್ರಂಥಗಳನ್ನೋದದೆ ನಿರ್ವಾಹವಿಲ್ಲ!!! ಏನುಮಾಡಬೇಕು? ವ್ಯೈಮೇಲೆ ಪ್ರಸಂಗಬಂದರೆ ಮನುಷ್ಯನಿಗೆ ಏನಾರೆ ಯುಕ್ತಿ ಹೊಳೆಯದಿರದು. ಆಗ ಒಂದು ಯುಕ್ತಿ

ಹೊಳೆದು ಇಂಗ್ಲಿಷುಗ್ರಂಥಗಳನ್ನು ತರಿಸಿಕೊಳ್ಳಲು ನಿಶ್ಚಯಿಸಿದನು. ತಾನೋದಿದ ದೇಶಭಾಷಾನುವಾದದ ಗ್ರಂಥಗಳಲ್ಲಿ "ಪರಮಾತ್ಮ" ಎಂಬ ಶಬ್ದವು ಒಂದೊಂದು ಪುಟದಲ್ಲಿ ಹತ್ತೆಂಟು ಸಾರೆ ಬಂದಿದ್ದರಿಂದ ಮೂಲಗ್ರಂಥದಲ್ಲಿಯೂ ಪ್ರತಿಯೊಂದು ಪುಟದಲ್ಲಿ ಅದನ್ನು ನಿರಾಯಾಸವಾಗಿ ಗುರುತಿಸಬಹುದಲ್ಲವೇ ? ಅಲ್ಲದೆ ದೇವರು ಎಂಬರ್ಥದ ಶಬ್ದಗಳ ಮೊದಲಕ್ಷರವು ಇಂಗ್ಲಿಷಿನಲ್ಲಿ ಯಾವಾಗಲೂ ದೊಡ್ಡಕ್ಷರವಾಗಿರಬೇಕೆಂಬ ಪರಿಪಾಠವಿರುವದರಿಂದ ಅದನ್ನು ಗುರುತಿಸಲಿಕ್ಕೆ ಇನ್ನಿಷ್ಟು ಅನುಕೂಲವಾಗುವಂತಿದೆಯಲ್ಲಾ !!

ಹೀಗೆಂದು ಆಲೋಚಿಸಿ ಪುಸ್ತಕಗಳನ್ನು ತರಿಸಿದನು. ತೆರೆದು ನೋಡಿದರೆ ಪುಸ್ತಕದ ತುಂಬೆಲ್ಲಾ "**God**"-**ಗಾಡ್** ಎಂಬ ಶಬ್ದವು ನಿಚ್ಚಳವಾಗಿ ಒಡೆದು ಕಾಣಿಸುತ್ತಿತ್ತು !!! ಅದು ನಾವು ದಿನಾಲು ಬಳಿಸುವ "ದೇವರು" ಎಂಬ ಶಬ್ದಕ್ಕೆ ಸಮಾನವಾದ ಅರ್ಥವುಳ್ಳ ಶಬ್ದವೇ ಆಗಿದ್ದರಿಂದ ಜ್ಞಾನಸಭಿಕನ್ನಾವಿಗೆ ದೊಡ್ಡದೊಂದು ಸಂಶೋಧನ ಮಾಡಿದ್ದನ್ನು ಆನಂದವಾಯಿತು !!

ಅನುತಾಪದ ಅನಂತರ ಉಂಟಾದ ಆನಂದದಲ್ಲಿ ಅದ್ಭುತಸಾಮರ್ಥ್ಯವಿರುತ್ತಿರುತ್ತದೆ. ಗಾಡ್ ಎಂಬ ಶಬ್ದವು ಸಿಕ್ಕಿದ್ದರಿಂದಾದ ಹರುಷವು ನಮ್ಮ ನಾಯಕನಿಗೆ ಮುಂದಿನ ಹಾದಿಯನ್ನು ತೆರೆದು ತೋರಿಸಿತು. ತನ್ನ ಆ ಸಂಧಿಗ್ಧ ವಾಕ್ಯಗಳು ಮೊದಲೋದಿದ ಪುಸ್ತಕದಲ್ಲಿ ಸುಮಾರು ಎಷ್ಟು ಪ್ಯಾರಾಗಳನ್ನು ದಾಟಿ ಸಿಕ್ಕುವದೋ ಇಂಗ್ಲಿಷ ಪುಸ್ತಕದಲ್ಲಿ ಅಷ್ಟು ಖಂಡಗಳನ್ನು ತಿರುವಿಹಾಕಿ, ಅಲ್ಲೇ ಹಿಂದುಮುಂದು ಹುಡುಕಾಡಿದರೆ ಸಾಕು. ಅಲ್ಲದೆ ಅನುವಾದ ಗ್ರಂಥದ ಸಂದಿಗ್ಧವಾಕ್ಯವೊಂದರ ಹಿಂದಿನ ಪ್ಯಾರಾದಲ್ಲಿ ಒಂದು ಸಂಸ್ಕೃತ ಶ್ಲೋಕವಿದ್ದು, ಅದರ ಮುಂದಿನ ಖಂಡದಲ್ಲೇ ಮೊಟ್ಟ ಮೊದಲಿನ ಒಂದೆರಡು ವಾಕ್ಯಗಳನ್ನು ದಾಟಿ ತನ್ನ ಇಚ್ಛಿತವಾಕ್ಯವಿದ್ದ

ದ್ದರಿಂದ, ಮೂಲಗ್ರಂಥದಲ್ಲಿ ಇದೇ ಕುರುಹನ್ನವಲಂಬಿಸಿ ಪುಟಗಳನ್ನು ತಿರುವಿಹಾಕಲು ಅದು ಕಣ್ಣಿಗೆ ಬಿತ್ತು.–

**" When our eyes that are now blinded by the idea of matter, open to the supreme light, we shall find that nothing is inanimate, but all contains life, mind, knowledge, bliss, divine force and being. "**

ಅಹಾ! ಇದರಲ್ಲಿ '**ಕೋಟಿ** ಜನ್ಮ'ವೂ ಇಲ್ಲ! 'ತಲೆಗಟ್ಟಿಸಿಕೊಳ್ಳುವದೂ' ಇಲ್ಲವಲ್ಲಾ!! ಭೌತಿಕ ವಿಚಾರದಿಂದ ಕುರುಡಾದ ನಮ್ಮ **ಈಗಿನ ನೇತ್ರವು ಮೇಲಿನ ಬೆಳಕಿನಿಂದ ಅರಳಿದಾಗ** ಜಡವೆಂಬುದೇ ಇಲ್ಲ. ಆಗ ಎಲ್ಲವೂ ಜೀವಂತವಾಗಿದ್ದು ಪ್ರಾಣ, ಮನ, ಬುದ್ಧಿ, ಆನಂದ, ಸತ್ತು, ಚಿತ್ತುಗಳಿಂದ ಕೂಡಿದೆಯೆಂದು ಗೊತ್ತಾಗುವದು." ಈಗ ನಮ್ಮ ನಾಯಕನಿಗಾದ ಆನಂದಕ್ಕೆ ಎಳವೇ? ಅರವಿಂದರಿಗೆ ಹೃದಯದಿಂದೊಂದು ಅನಿರ್ವಚನೀಯವಾದ ಪ್ರಣಾಮವನ್ನರ್ಪಿಸಿದನು!! ಮೂಲದಿಂದ ದೂರದೂರ ಅಲೆದಷ್ಟೂ ದುಃಖವೇ ಹೆಚ್ಚೆಂಬುದನ್ನು ಈಗ ಅರಿತು ಆಶ್ಚರ್ಯಪಟ್ಟನು! "ಏನೇನು ಯತ್ನ ಮಾಡಿದರೂ **ಜಡದೃಷ್ಟಿಗೆ** ದಿವ್ಯಸತ್ಯದ ಸಾಕ್ಷಾತ್ಕಾರವು **ಆಗಲಾರದು**" ಎಂಬ ಮೂಲಭಾವವನ್ನೇ ಅನುವಾದಕರು ಹಾಗೆ ಬದಲಿಸಿದ್ದರು. ಅವರ ಪುಸ್ತಕದಲ್ಲಿಯೂ, ಮುಂದಿನ ವಾಕ್ಯಗಳಲ್ಲಿ ಇವೇ ಶಬ್ದಗಳಿದ್ದರೂ, ಅವರು ಜಟಿಲ ವಿಷಯವಿದ್ದಲ್ಲಿ ಅಲ್ಲಲ್ಲಿ ವಿಸ್ತರಿಸಿ ಬರೆದಿದ್ದರಾದ್ದರಿಂದ ವಸ್ತುಸ್ಥಿತಿಯು ಇಲ್ಲಿಗೆ ಬಂದು ಮುಟ್ಟಿತ್ತು!!

ಮತ್ತೊಂದು ವಾಕ್ಯದ ಸಂದೇಹನಿರಸನವೂ ಹೀಗೆಯೇ ಆಯಿತು. ಅಲ್ಲಿ ಅರವಿಂದರ ಅಭಿಪ್ರಾಯವು ಏನಿದ್ದಿತೆಂದರೆ–" ಪರಮಗಮ್ಯವನ್ನು ಒಂದೊಂದು ಜನಾಂಗದ ಪುರಾತನರು ಒಂದೊಂದು ವಿಧವಾಗಿ ಹೇಳಿದ್ದಾರೆ. ಅವುಗಳನ್ನೆಲ್ಲ ವಿಮರ್ಶಿಸುತ್ತ ಕೂಡುವದಕ್ಕಿಂತ

ದೇವರೆಂದರೆ ನಮಗಿಂತ ಅತ್ಯಂತ ಹೆಚ್ಚಿನದಾದ ಒಂದು ಅಗಾಧ ಸತ್ತ್ವವೆಂದೊಪ್ಪಿಕೊಂಡರೆ ಸಾಕು" ಅಹಾ! ಇದಕ್ಕೆ ಯಾರು ಒಪ್ಪಲಾರರು?

ಹಗಲಿರುಳೂ ಕೂಡಿಯೇ, ಡಿಕ್ಸನರಿ ಮತ್ತು ಸೆಲ್ಫ್‌ಟೀಚರ ಗಳನ್ನು ಘೋಕು ಹೊಡೆದು ಹೊಡೆದು ಅರವಿಂದರ ಗ್ರಂಥಗಳನ್ನು ಹೇಗಾದರೂ ಒಮ್ಮೆ ಓದಿ ಮುಗಿಸಿದನು. ಅವರ ಎಲ್ಲಾ ವಿಚಾರ ಗಳು ಹೊಳೆಯದಿದ್ದರೂ, ದೇವರೆಂದರೆ ಅವರೇನೆಂದು ತಿಳಿದುಕೊಂಡಿ ದ್ದಾರೆಂಬುದು ಮಾತ್ರ ಬಹಳ ಮಟ್ಟಿಗೆ ಗೊತ್ತಾದಂತಾಯಿತು. ಗೀತೆ ಯಲ್ಲಿ ಹೇಳಿದ "ಪುರುಷೋತ್ತಮ"ನ ವ್ಯಾಖ್ಯೆಯೇ ಇವರ "ದೇವರ" ವ್ಯಾಖ್ಯೆಯಾಗಿದ್ದಿತು:—

"ದ್ವಾವಿಮೌ ಪುರುಷೌ ಲೋಕೇ
ಕ್ಷರಶ್ಚಾಕ್ಷರ ಏವ ಚ।
ಕ್ಷರಃ ಸರ್ವಾಣಿ ಭೂತಾನಿ
ಕೂಟಸ್ಥೋಽಕ್ಷರ ಉಚ್ಯತೇ ॥
ಉತ್ತಮಃ ಪುರುಷಸ್ತ್ವನ್ಯಃ
ಪರಮಾತ್ಮೇತ್ಯುದಾಹೃತಃ ॥
**ಯೋ ಲೋಕತ್ರಯಮಾವಿಶ್ಯ**
**ಬಿಭರ್ತ್ಯವ್ಯಯ ಈಶ್ವರಃ ॥**
ಯಸ್ಮಾತ್ ಕ್ಷರಮತೀತೋಽಹಂ
ಅಕ್ಷರಾದಪಿ ಚೋತ್ತಮಃ ॥
ಅತೋಽಸ್ಮಿ ಲೋಕೇ ವೇದೇ ಚ
ಪ್ರಥಿತಃ ಪುರುಷೋತ್ತಮಃ ॥

ಜೀವಿಗಳ ಜೀವವೆಂಬ ನಾಶವಂತ ಪುರುಷವಿಶೇಷವೊಂದು; ಮತ್ತು ಅವಿನಾಶಿಯಾದ ಆತ್ಮವೆಂಬ ಅಮರವಾದ ಪುರುಷವಿಶೇಷ

ವಿನ್ನೊಂದು; ಇವೆರಡೂ ಪುರುಷವಿಶೇಷಗಳಿಗಿಂತ ಹೆಚ್ಚಿನವನೊಬ್ಬನಿದ್ದಾನೆ; ಅವನಿಗೇ ಪರಮೇಶ್ವರನೆಂದೆನ್ನುತ್ತಾರೆ. **ಅವನು ತ್ರಿಭುವನವನ್ನೆಲ್ಲ ವ್ಯಾಪಿಸಿಕೊಂಡಿದ್ದು ಪೋಷಕನಾಗಿದ್ದಾನೆ.** ಈತನು ಉಭಯ ಪುರುಷವಿಶೇಷಗಳನ್ನು ದಾಟಿ ಮೀರಿದವನಾದ್ದರಿಂದ ಇವನಿಗೆ ಜಗತ್ತಿನಲ್ಲಿ ಪುರುಷೋತ್ತಮನೆಂಬ ಹೆಸರುಂಟಾಗಿದೆ.''

ಇಷ್ಟೊತ್ತಿಗೆ ಒಬ್ಬ ಕ್ರೈಸ್ತ ಮಿತ್ರನ ಭೆಟ್ಟಿಯಾಯಿತು. ಅವನಲ್ಲಿದ್ದ ಬಾಯ್ಬಲ್ಲಿನ ಭಾಷ್ಯವನ್ನು ಇಸಿದುಕೊಂಡು ''ದೇವರನ್ನು ಎಂದೂ ಯಾರೂ ನೋಡಿಲ್ಲ'' ಎಂಬ ಆ ವ್ಯಾಕ್ಯವನ್ನು ತೆಗೆದು ಓದಲು, ಭಾಷ್ಯಕಾರನು — ''**ಮಾನುಷ ನೇತ್ರವು**'' — Human eye— ಹ್ಯೂಮನ್ ಆಯ್ – ಎಂಬದು ಎಂದೆಂದಿಗೂ ಆ ಆತ್ಮಸ್ವರೂಪನಾದ ದೇವರನ್ನು ಕಾಣಲಾರದೆಂದು ಅರ್ಥಹೇಳಿದ್ದು ಗೊತ್ತಾಯಿತು. ರಲಿವಿಂದರ ಅರ್ಥಕ್ಕೆ ಅದು ತುಂಬಾ ಹೊಂದುತ್ತಿರುವದನ್ನು ನೋಡಿ ಈತನಿಗೆ ಅಪರಿಮಿತ ಆಶ್ಚರ್ಯವೂ, ಆನಂದವೂ ಆದದ್ದು ಸಹಜವಲ್ಲವೇ? ಗೀತೆಯಲ್ಲಿ ಕೂಡ ಹೀಗೆಯೇ ಹೇಳಿದೆ.

''ನ ತು ಮಾಂ ಶಕ್ಯಸೇ ದ್ರುಷ್ಟುಂ
**ಅನೇನೈವ ಸ್ವಚಕ್ಷುಷಾ ||''**

''**ನಿನ್ನ ಈ ಕಣ್ಣುಗಳಿಂದ** ನನ್ನನ್ನು ನೋಡಲಿಕ್ಕೆ ಶಕ್ಯವಿಲ್ಲ.''



# ೯. ಮತ್ತೆಮತ್ತೆ ಊಟ ಮತ್ತೆಮತ್ತೆ ಹಸಿವು.

ಒಂದೇ ವರ್ಗದ ಹಲವು ಮಾತುಗಳಲ್ಲಿ ಒಂದು ವಿಷಯಕ್ಕೆ ಸಂದೇಹವುಂಟಾದರೆ, ಹೆಚ್ಚುಕಡಿಮೆ ಆವೆಲ್ಲ ಮಾತುಗಳಲ್ಲಿ ಸಂಶಯಕ್ಕೆ ಆಸ್ಪದವುಂಟಾಗುತ್ತದೆ. ಅದರಂತೆ ಅಂಥವುಗಳಲ್ಲಿ ಒಂದನ್ನು ಕುರಿತು ಒಳ್ಳೆಯ ಮನವರಿಕೆಯಾದರೆ, ಇನ್ನುಳಿದವುಗಳನ್ನೆಲ್ಲ ಸುಮಾರು ಅದೇ ತೆರದ ದೃಷ್ಟಿಯಿಂದ ನೋಡಹತ್ತುತ್ತೇವೆ. ಇದು ಮಾನವಕೋಟಿಯ ಮನೋಧರ್ಮವಾಗಿದೆ. ಹೀಗೆಂತಲೇ ನಮ್ಮ ಜೀವನದಲ್ಲಿ ನಾವು ದಿನಾಲು ಪ್ರಶಂಸಿಸುತ್ತಿರುವ ಅಥವಾ ದೂಷಿಸುವ ವಿಷಯಗಳಲ್ಲಿ ಎಷ್ಟೋ ಮಾತುಗಳನ್ನು ಪರೀಕ್ಷಿಸದೆಯೇ ಹಾಗೆ ಮಾಡುತ್ತಿರುತ್ತೇವೆ. ಮನಸಿನ ಈ ಹುಂಬಗುತ್ತಿಗೆಗೆ ನಾವು ಸಂಪೂರ್ಣವಾಗಿ ಅಧೀನರಾಗಿರುವದರಿಂದಲೇ ಇಂದು ಪುರಸ್ಕರಿಸುವ ಒಂದು ಮಾತನ್ನೇ, ಮುಂದೊಮ್ಮೆ ಅದರ ಯಾವದೋ ಒಂದು ವಿಗುಣದ ಪರಿಚಯವಾಗಲು, ತಿರಸ್ಕರಿಸಹತ್ತುತ್ತೇವೆ. ಮನೋರಾಜ್ಯದ ಈ ತಗ್ಗುದಿನ್ನೆಗಳ ನಾತನ್ನು ದಾಟುವ ವರೆಗೆ ಮನುಷ್ಯನ ಶ್ರದ್ಧೆಯಲ್ಲಿ ಏರಿಳಿತಗಳು ತಪ್ಪುವದಿಲ್ಲ. ಈ ಕಾಲದಲ್ಲಿ ಆತನಿಗೆ ಯಾವ ಪರ್ಯಾಯದಿಂದಲಾದರೂ ಪ್ರತಿಯೊಂದು ಮಾತಿನ ಬಗ್ಗೆ ಪ್ರತ್ಯೇಕವಾಗಿ ಮನವರಿಕೆಯುಂಟಾಗುತ್ತ ಹೋದಲ್ಲದೆ ಪ್ರಗತಿಯಿಲ್ಲ.

ನಮ್ಮ ಜ್ಞಾನಭಿಕ್ಷುವೀಗ ಬಹುತರವಾಗಿ ಧರ್ಮಸಾಮ್ರಾಜ್ಯದ ಎಲ್ಲ ಮಾತುಗಳನ್ನೂ, – ಬುದ್ಧಿಗೋಚರವಿಲ್ಲದಿದ್ದರೂ ಹಂಡೆಯೊಳಗೊಂದಗುಳ ರುಚಿಸಿದವನಂತೆ ಊಹೆಯಿಂದ ನಂಬುವವನಾಗಿದ್ದಾನೆ. ಆದರೆ ಇಷ್ಟು ಮಾತ್ರಕ್ಕೇ ಸಂದೇಹಗಳೆಲ್ಲ ಲಯಿಸಿರಲಾರವು. ಅವು ಮೂರ್ಛಿತವಾಗಿರುತ್ತವೆ. ಆದರೆ ಆಗ ನಮಗೆಲ್ಲಿ ಹಾಗೆ

ಅನಿಸುತ್ತಿರುವದು ? ಸ್ಥೂಲವಾನವದ ಶ್ರದ್ಧೆಯು ಯಾವಾಗ ಕಳಚಿ ಬಿದ್ದೀತೆಂಬ ನಿಯಮವೇ ಇಲ್ಲ. ಯಾವದೊಂದು ವಿಷಯದ ಸರ್ವಾಂಗೀಣ ಜ್ಞಾನವು—" ತತ್ತ್ವತಃ "—ಎಂದಿಗುಂಟಾಗುವದೋ ಅಂದಿಗೇ ಗೆಲವು. ಆದರೆ ಈ ಸೋಲುಗೆಲುವುಗಳ ನಿಬಿಡ ದರಿಕಂದರಗಳಲ್ಲಿ ನಿಸ್ತರಿಸಿ ಮುಂದರಿಯಲಿಕ್ಕೆ ಎಷ್ಟು ಜನರಿಗೆ ಸಾಧ್ಯವಾಗುವದು ? "ಕಶ್ಚಿನ್ಮಾಂ ವೇತ್ತಿ ತತ್ತ್ವತಃ."

ನಮ್ಮ ನಾಯಕನಿಂದು ಬಸವಾದಿ ಶಿವಶರಣರ ಪಾದಧೂಳಿಯಿಂದ ಪಾವನವಾದ ಕಲ್ಯಾಣ ಕ್ಷೇತ್ರವನ್ನು ಸಂದರ್ಶಿಸ ಹೊರಟಿದ್ದಾನೆ. ಬಸವಣ್ಣನ ಭಕ್ತಿ, ಚೆನ್ನಬಸವಣ್ಣನ ಅನುಭವ, ಪ್ರಭುದೇವರ ಸರ್ವಮುಖೀ ಕುಶಾಗ್ರತೆ, ಸಿದ್ಧರಾಮನ ಸಮತ್ವ, ಅಕ್ಕ ಮಹಾದೇವಿಯ ಒಳಹೊರಗರಿಯದ ಸತ್ತ್ವಶುದ್ಧಿ—ಇವುಗಳೆಲ್ಲಾ ಈತನ ಹೃದಯವನ್ನು ಅಗಾಧವಾಗಿ ಆಕರ್ಷಿಸಿವೆ. ಅವರ ಪಾವನ ಧರೆಯಲ್ಲೊಮ್ಮೆ ಮನದಣಿಯುವಂತೆ ಮೈಯ್ಯನೀಡಾಡುವ ಭಕ್ತಿ ವಿಕಾರವು ಮುಸುಗುಟ್ಟುತ್ತಲಿದೆ! "ಭಕ್ತಿರತಿಯ ವಿಕಲತೆಯನೇನೆಂಬೆ ರಯ್ಯಾ !! ಕಾಮಿಗೆ ಉಂಟೆ ಲಜ್ಜೆ ನಾಚಿಕೆ! ಕಾಮಿಗೆ ಉಂಟೆ ಮಾನಾಭಿಮಾನ !! ಶರಣರಿಗೊಲಿದ ಮರುಳರಿಗೇನೆಂದು ಬೆಸಗೊಂಬೆರಯ್ಯಾ ಕೂಡಲಸಂಗಮದೇವಾ !!! " ಎಂದು ಬಸವಣ್ಣನವರು ಇಂಥ ಭಕ್ತಿರತಿಯ ಮರ್ಮವನ್ನು ಅನುಭವಿಸಿ ಬಣ್ಣಿಸಿದ್ದಾರೆ.

ಜ್ಞಾನಭಿಕ್ಷುವಿಗೆ ಕಲ್ಯಾಣ ಕ್ಷೇತ್ರದ ಕಲ್ಲು ಮಣ್ಣುಗಳೆಲ್ಲ ಪಾವನದ ಕಣಿಯಾದವು, ಕೆರೆಕೊಳ್ಳಗಳೆಲ್ಲ ತಿಳಿವಿನ ತೀರ್ಥಗಳಾದವು! ಏನು ಹರುಷ, ಏನು ತವಕ, ಏನು ಉತ್ಕಟದ ಉತ್ಸಾಹ !!! ಕೊಳದಲ್ಲೊಮ್ಮೆ ಮುಳುಗುವನು, ಹುಡಿಯಲ್ಲೊಮ್ಮೆ ಹೊರಳುವನು ! ಕೊಳದ ಪುಣ್ಯೋದಕವನೊಮ್ಮೆ ಕಂಠಮಟವಾಗಿ ಕುಡಿಯುವನು; ಧರೆದ ಧೂಳಿಯನೊಮ್ಮೆ ಮದ್ದಾನೆಯಂತೆ ತೂರುವನು !!!

ಪಾವನತರ ಪುಣ್ಯಧರೆಯೇ, ಪುರಾತನರ ಪರಮ ಸಿರಿಯೇ !! ಅಪ್ಪಿ ಅಪ್ಪಿ ಎದೆ ದಣಿಯದು, ನೋಡಿನೋಡಿ ನಯನ ದಣಿಯವು!! ನಿನ್ನನೆಲ್ಲ ಕರಗಿಸಿ ಆಕಂಠವಾಗಿ ಕುಡಿಯಲೇ ? !!! ಆಕಲ್ಪ ನಿನ್ನೊಳಗೇ ಮುಳುಗಲೆ ? !!! ತಾಯಿಾ ! ತಾಯಿಾ ! ನಿನ್ನ ಸಪ್ಪುವ ಹಸಿವು ಹೇಗೆ ಹಿಂಗುವದು ಹೇಳೇ ? !! '' ಹೀಗೆಂದು ಆತನು ಕಣ್ಣುಮುಚ್ಚಿ ಹಣ್ಣಿನ ರಸವನ್ನು ಹೀರುವ ಶುಕದಂತೆ ಭೂಮಿತಾಯಿಯ ತೊಡೆಯ ಮೇಲೆ ಒರಗಿ ತೂಕಡಿಸಿದನು !

ಇಡಿ ದಿನಗಳನ್ನೆಲ್ಲ ಬಸವಣ್ಣನವರ ವಚನಗಳನ್ನೋದುವದರಲ್ಲಿ ಕಳೆದನು. ಇರುಳು ಬಂತು. ಆಗ ಆತನ ಹೃದಯದಲ್ಲೊಂದು ಆಶೆ ಅವಿಕಲವಾಗಿ ಕಂಗೊಳಿಸಹತ್ತಿತು. ಅದೇನೆಂದರೆ—'' ಅನುಭವಕ್ಕೆ ಆಶೆಪಟ್ಟು ನಾನಿಲ್ಲಿಗೆ ಬಂದಿರಲು, ಶರಣರ ಕರುಣವು ತುತ್ತನುಣಿಸದೆ ತಿರುಗಿ ಅಟ್ಟಲಾರದು ! ಇಂದಿನಿರುಳು ನನಗೆ ದೃಷ್ಟಾಂತಗಳಾಗದೆ ಹೋಗವು. '' ಹೀಗೆಂದು ಹಿರಿಯಾಸೆಪಟ್ಟು ಸಮರಾತ್ರಿಯವರೆಗೆ ಶರಣರನ್ನು ಸ್ತುತಿಸುತ್ತ ಸ್ತುತಿಸುತ್ತ ನಿದ್ದೆಹೋದನು. ಅದೆಂಥ ಪ್ರಗಾಢವಾದ ಭರವಸವೆಂದುಹೇಳಲಿ !!!

ಅತ್ತ ನಸುಕುಹರಿಯಿತು, ಇತ್ತ ನಮ್ಮ ನಾಯಕನ ನಿದ್ರೆ ಹರಿಯಿತು. ಆದರೆ ಆಶೆಮಾಡಿದ ಭರವಸವು ಆಶೆಯಾಗಿಯೇ ಉಳಿಯಿತು. ಕೇಳುವದಿನ್ನೇನು ? ನಮ್ಮ ನಾಯಕನ ಹೃದಯವು ಬಂಡೆಬಿದ್ದ ಕೊಳದಂತೆ ಒಮ್ಮೆಲೆ ಅಕರಾಳ ವಿಕರಾಳವಾಗಿ ವಿಕ್ಷೋಭೆ ಹೊರದಿದ ಪರಿಯನ್ನು ಬಣ್ಣಿಸಲಿಕ್ಕೆ ಬಾಯಿಬಾರದೆ ಕವಿಕುಂಜರ ಲೀಲಾವತೀಕಾವ್ಯದೊಳಗಿನ ಲೀಲಾವತಿಯ ವಿರಹವರ್ಣನೆಯ ಪದ್ಯವೊಂದನ್ನು ಹೇಳಿಬಿಡುವೆನು—ಸಾಕು !

'' ಎಲರಿಂದೆಚ್ಚತ್ತು ಲೀಲಾವತಿ ನಿಜಪತಿಯಂ
ಮಂಚದೊಳ್ ಕಾಣದಾಗಳ್ ।

ಚಲೆಯಾದಳ್ ಮೂರ್ಛೆವೋದಳ್ ಮರೆದಳೊ-
ರಗಿದಳ್ ಕಂದಿದಳ್ ಕುಂದಿದಳ್ ಕೋ- ॥
ಟಲೆಗೊಂಡಳ್ ಸಾವುಗಂಡಳ್ ಕಳವಳಿಸಿದಳಾಸತ್ತಳತ್ತಳ್
ಬೆಮರ್ತಳ್ ।
ನೆಲೆಯಿಂದಾ ಬಿದ್ದೆದ್ದಳ್ ವಿರಹದುರಿಯ ಸಂತಾಪ-
ವಿಭ್ರಾಂತಿಯಿಂದಂ ।

ಎಲ್ಲಾ ಸರಿಯೇ; ಆದರೂ ಜೀವನದ ನೊಗವನ್ನು ಹಾಗೇ ಹೊತ್ತು ಎಳೆಯಲೇ ಬೇಕಲ್ಲವೇ! ಇನ್ನೇನು ಮಾಡಬೇಕು? ಮೂವತ್ತು ವರುಷಗಳ ಹಿಂದೆ ತನ್ನ ಹತ್ತುವಳಿಯೊಳಗೆ – ದೂರದಿಂದ ಕಕ್ಕನಾಗುವಂಥವನೊಬ್ಬನು ಬೈರಾಗಿಯಾಗಿ ಹೋಗಿದ್ದನು. ಏಸೋ ದಿನಗಳಿಂದಿಲ್ಲದ ಆತನ ಸುದ್ದಿಯು ನಾಲ್ಕಾರು ತಿಂಗಳ ಹಿಂದೆ ಹೇಗೋ ತಿಳಿದಿತ್ತು. ಅವನು ಕಲ್ಯಾಣದ ನೆರೆಯಲ್ಲೇ ಅಲ್ಲೇ ಎಲ್ಲೋ ಒಂದು ನಾಲ್ಕೇ ಮನೆಯ ಚಿಕ್ಕ ಹಳ್ಳಿಯಲ್ಲಿ ಚಪ್ಪರ ಕಟ್ಟಿಕೊಂಡು ವಾಸ ಮಾಡುತ್ತಿದ್ದಾನೆಂದು ಗೊತ್ತಾಗಿತ್ತು. ಈಗ ನಮ್ಮ ನಾಯಕನಿಗೆ ಒಂದು ಮಾತು ಹೀಗೆ ಅನಿಸಹತ್ತಿತು:– "ಈತನಾದರೋ ನನ್ನ ರಕ್ತ ಸಂಬಂಧಿಕನಾಗಿದ್ದಾನೆ. ಉಳಿದ ಬೈರಾಗಿಗಳೆಲ್ಲ ವಂಚಿಸುವವರಾದರೆ ಈತನು ನನಗೊಬ್ಬನಿಗಾದರೂ ಮೋಸ ಮಾಡಲಿಕ್ಕಿಲ್ಲ. ಆತನಿಗೆ ಭೆಟ್ಟಿಯಾಗಿ ಅವನ ಅನುಭವಗಳನ್ನು ಕೇಳಿ ತಿಳಿದುಕೊಳ್ಳೋಣ."

ದಾರೀ ನಡೆದು ಹೊತ್ತು ಮುಳುಗುವ ಸಮಯಕ್ಕೆ ಅಲ್ಲಿಗೆ ಹೋಗಿ ಸೇರಿದನು. ಅಲ್ಲಿ ಮೂರೋ ನಾಲ್ಕೋ ಇಷ್ಟೇ–ಮನೆಗಳು; ಅದರಲ್ಲೇ ಒಂದು ಗೌಡರ ಮನೆ, ಒಂದು ಹೊಲೆಯರದು, ಉಳಿದ ವೆರಡು ಕುರುಬರವು. ಅಡವಿಯೆಂದರೆ ಅಡವಿ, ಊರೆಂದರೆ ಊರು. ಅಲ್ಲಿ ಚಪ್ಪರದ ಮುಂದೆ ಅರವತ್ತು ವರುಷದ ಮುನಿಯಂಥ ಮುದುಕನು ಕುಳಿತುಕೊಂಡಿದ್ದನು. ನಮ್ಮ ನಾಯಕನು, ತನ್ನ ವಂಶಿಕ

ನಾಗಿಯೂ ಸಾತ್ವಿಕ ಮೂರ್ತಿಯಾಗಿಯೂ ಇದ್ದ ಆ ಕಾವೀ ಬಟ್ಟೆಯ ಬೈರಾಗಿಯನ್ನು ನೋಡಿ ಎಷ್ಟೋ ಸಂತೋಷಪಟ್ಟನು. ಮುಂದಕ್ಕೆ ಹೋಗಿ ಆತನಿಗೆ ನಮಸ್ಕರಿಸಿ, ತನ್ನ ಪರಿಚಯವನ್ನು ಹೇಳಿಕೊಟ್ಟನು. ಎಂಥ ಬೈರಾಗಿಯಾದರೇನಾಯಿತು? ಎಷ್ಟೋ ಕಾಲದ ಅನಂತರ ತನ್ನ ಹುಟ್ಟಿದ ವಂಶದೊಳಗಿನವನೊಬ್ಬನನ್ನು ಕಂಡರೆ ತುಸುವಾದರೂ ಹಿಗ್ಗ ರುವನೇ? ಊರಕಡೆಯ ಸಮಾಚಾರವನ್ನೆಲ್ಲ ಕೇಳಿಕೊಂಡ ಮೇಲೆ, ರಾತ್ರಿಯ ಊಟವನ್ನು ಮುಗಿಸಿದ ಬಳಿಕ – ತನ್ನಲ್ಲಿ ಒಂದವರಿಗೆಲ್ಲ ಹೇಳುವ ವಾಡಿಕೆಯಂತೆ ವೇದಾಂತದ ಮಾತುಗಳನ್ನು ಹೇಳಹತ್ತಿದನು. ಆ ಪ್ರಮಾಣ, ಈ ಪ್ರಮಾಣ, ಅನುಮಾನ ಪ್ರಮಾಣ ಮುಂತಾದ ಅಷ್ಟವಿಧ ಪ್ರಮಾಣಗಳ ಮೂಲಕ ಬ್ರಹ್ಮವಸ್ತುವನ್ನು ಗುರುತಿಸುವ ರೀತಿಗಳನ್ನು ವಿವರಿಸಿದನು. ಈತನು ಸುಮ್ಮನೆ ಕೇಳುತ್ತಲಿದ್ದು ಎಲ್ಲ ಮುಗಿದ ಮೇಲೆ ಒಂದು ಪ್ರಶ್ನೆಯನ್ನು ಕೇಳಿದನು. ಅದು:– "ಈ ನೂರು ಪ್ರಮಾಣಗಳನ್ನೆಲ್ಲ ಮೂಲಿಗೆ ಕೂಡಿಸುವ ಪ್ರತ್ಯಕ್ಷ ಪ್ರಮಾಣವೊಂದಾದರೆ ಸಾಕಲ್ಲಾ!!! ಅದೊಂದನ್ನು ಬಿಟ್ಟರೆ, ಇವು ಏಸು ಕೂಡಿ ಏನು ಮಾಡಿಯಾವು? ನನಗೀಗ ಇವು ಯಾವವೂ ಬೇಕಾ ಗಿಲ್ಲ. ನಾನು ಪ್ರತ್ಯಕ್ಷಕ್ಕಾಗಿ ಕಳವಳಿಸುತ್ತಿದ್ದೇನೆ. ನೀವು ಎಷ್ಟಾದರೂ ನನ್ನ ಕಕ್ಕಂದಿರಾಗಿರುವಿರಾದ್ದರಿಂದ ನಿಮ್ಮೊಡನೆ ಅಧಿಕಾರದಿಂದ ಮಾತ ನಾಡುವದಕ್ಕೆ ನನಗೆ ದಾರಿಯಿದೆ. ನಿಮ್ಮ ಜೀವನದ ನಿಜ ವಿಶ್ವಾಸ ವೇನೆಂಬದನ್ನು ನನಗೆ ತಿಳಿಸಿದರೆ ಸಾಕು. ಇಷ್ಟೊತ್ತು ಹೇಳಿದ್ದೆಲ್ಲ ಅಷ್ಟೇ, ನನಗೆ ಅದೊಂದೇ ಅಷ್ಟೇ!! ನಾನು ಯಾವ ಸಾಧು–ಬೈರಾಗಿ ಗಳಲ್ಲಿಯೂ ಸತ್ಯವಂತಿಕೆಯನ್ನು ಕಾಣದೆ, ನನ್ನವರೆಂಬ ಒಂದೇ ಭರ ವಸದಿಂದ ಅದನ್ನಾಶಿಸಿ ಇಲ್ಲಿಗೆ ಬಂದಿದ್ದೇನೆ. ನನಗೆ ಬೇಕಾದ ಭಿಕ್ಷೆ ಯನ್ನು ಹಾಕದೆ, ಬೇಕಾಗಲಾರದ್ದನ್ನು ತುತ್ತು ಮಾಡಿ ಉಣಿಸಿದರೂ ನಾನೊಲ್ಲೆ!" ಈ ಮಾತಿಗೆ ಆ ವೃದ್ಧಸಂನ್ಯಾಸಿಯು ಸಂತುಷ್ಟ

ನಾಧ್ವನು. ಯಾಕೆಂದರೆ ಮೊದಲಿಗೆ ತಾನೂ, ಕಂಡ ಬೈರಾಗಿಗಳಿಗೆ ಹೀಗೇ ಕೇಳುತ್ತಿದ್ದನು. ಈಗ ಆತನು ಹೇಳಿದ್ದೇನೆಂದರೆ:—

"ತಮ್ಮಾ ! ಎಲ್ಲ ಬೈರಾಗಿಗಳಂತೆ ನನ್ನಲ್ಲಿಯೂ ಅವಗುಣಗಳಿಲ್ಲದೆ ಇಲ್ಲ. ಯಾಕೆಂದರೆ ಅವರಂತೆ ನಾನೂ ಮನುಷ್ಯನೇ ಆಗಿದ್ದೇನಲ್ಲವೇ ? ಏನಿದ್ದರೂ ನಿನಗೆ ಒಂದು ಮಾತಿನ ಭರವಸವನ್ನು ಕೊಡದಿರಲಾರೆನು. ಅದೇನೆಂದರೆ– ಎಷ್ಟಾದರೂ ನೀನು ನನ್ನ ಪೂರ್ವಾಶ್ರಮದ ರಕ್ತದವನಾಗಿದ್ದು, ಮೇಲೆ ಜಿಜ್ಞಾಸುವಾಗಿರುವಿಯಾದ್ದರಿಂದ ನನ್ನ ಅನುಭವವನ್ನು ಮರೆಮಾಚದೆ ಅರುಹುವೆನು.

"ಪೂರ್ವಾಶ್ರಮದಲ್ಲಿ ನನಗೂ ನಿನ್ನಂತೆ ದೇವರ ಹುಚ್ಚು ಹಿಡಿದಿತ್ತು. ಆಗ ನಾನು ಪಾಲಿಸಿದ ವ್ರತನಿಯಮಗಳಿಗೂ, ಪೂಜೆ ಪುನಸ್ಕಾರಗಳಿಗೂ ಲೆಕ್ಕವಿಲ್ಲ. ಆದರೇನು ? ಅವುಗಳಾವವೂ ನನ್ನನ್ನು ಸಮಾಧಾನ ಪಡಿಸಲಿಲ್ಲ.

"ಬಳಿಕ ಸತ್ಪುರುಷರ ದರ್ಶನದ ಹೊರತು ಗತಿಯಿಲ್ಲವೆಂದೆನಿಸಿತು. ಎಲ್ಲೆಲ್ಲಿ ಅಂಥವರಿದ್ದಾರೆಂಬರೆ ಅಲ್ಲಲ್ಲಿಗೆ ಹೋಗಿ, ಅವರೆಲ್ಲರಿಗೆ ಅತಿ ವಿನಯದಿಂದ– 'ದೇವರನ್ನು ಕಾಣುವದಕ್ಕೆ ಉಪಾಯವೇನೆ'ಂದು ಕೇಳುತ್ತಿದ್ದೆ. ಅಲ್ಲದೆ, ಕಂಡಿರುವಿರೇನೆಂದೂ ಪ್ರಶ್ನೆ ಮಾಡುತ್ತಿದ್ದೆ. ಅದಕ್ಕವರು – 'ಅಯ್ಯಾ ನಿನ್ನ ಕಾಲವು ಸಮೀಪಿಸಿದೆ. ಯಾರನ್ನೂ ಕೇಳುವದು ಬೇಡ'ವೆಂದು ಮಾತ್ರ ಹೇಳಿಬಿಡುತ್ತಿದ್ದರು.

"ಅದರಿಂದ ನನಗೆ ಎಳ್ಳಷ್ಟೂ ಸಮಾಧಾನವಾಗುತ್ತಿರಲಿಲ್ಲ. ಆಗ ನನಗೆ–ಸಾಧು ಸಂನ್ಯಾಸಿಗಳಿಗೆ ಅಗತ್ಯವಿರುವ ಅಲ್ಪ ಸ್ವಲ್ಪ ಅನ್ನ ವಸ್ತ್ರಗಳನ್ನು ದಾನವಾಗಿ ಕೊಡುತ್ತ ಹೋಗುವದೇ ಉಪಾಯವೆಂದೆನಿಸಿ ಹಾಗೂ ಮಾಡಹತ್ತಿದೆ. ಎಲ್ಲಿಯಾದರೂ ಅಂಥವರನ್ನು ಕಂಡರೆ, ಅವರಿಗೆ ಊಟ ಉಪಚಾರಗಳನ್ನು ಮಾಡಿಸುತ್ತಲೂ, ಬೇಕಾದರೆ ಅರಿವೆಗಳನ್ನು ಧರಿಸಲಿಕ್ಕೆ ಕೊಡುತ್ತಲೂ ಇದ್ದೆ. ಅಲ್ಲಿಗೆ ಬರುವ

ಎಷ್ಟೋ ಸಾಧುಸಂತರಲ್ಲಿ ನನಗೊಳ್ಳೇ ಒಪ್ಪೆನಿಸಿದವರನ್ನು ಹೀಗೆ ಆದರಿಸುತ್ತಿದ್ದೆ.

"ಹೀಗಿರಲು ಒಂದಾನೊಂದು ದಿವಸ ಪಂಢರಪುರದ ನದೀ ತೀರದಲ್ಲಿ ಒಬ್ಬ ತೇಜಸ್ವಿಯಾದ ಸಾಧುವನ್ನು ಕಂಡೆನು. ಯಥಾ ರೀತಿಯಿಂದ ಉಪಚರಿಸಿದ ಬಳಿಕ ಆತನ ತೇಜಕ್ಕೆ ಬೆರಗಾಗಿ ಸಂತಸ ದಿಂದ ನನ್ನಾಶೆಯ ಪ್ರಶ್ನವನ್ನಿಟ್ಟೆನು. ಅದಕ್ಕೆ ಅವನೂ ಮೊದಲಿನವ ರಂತೆಯೇ ಉತ್ತರವನ್ನು ಕೊಟ್ಟನಲ್ಲದೆ 'ಬೈರಾಗಿಯಾಗುವ ಹುಚ್ಚು ತನವನ್ನು ಮಾತ್ರ ಮಾಡಬೇಡ. ಸತ್ಪುರುಷರ ಸೇವೆಗಿಂತ ಅದರ ಲ್ಲೇನೂ ಹೆಚ್ಚಿನ ಹುರುಳಿಲ್ಲ' ಎಂದು ಹೇಳಿದನು. ಆದರೆ ನನಗೆ ಅವನ ಮಾತು ಸಮಂಜಸವೆನಿಸಿರಲಿಲ್ಲ. ಯಾಕೆಂದರೆ ಹೀಗೆ ಹೇಳುವವನು, ತಾನೇಕೆ ಸಂನ್ಯಾಸಿಯಾದನು? ಈತನ ಮಾತಿನಲ್ಲಿ ಏನಾದರೂ ತೊಂಡ ತೊಳಸವಿರಲಿಕ್ಕೆಬೇಕು.

ಮುಂದೆ ಆರೇಳು ತಿಂಗಳ ಕಾಲಾವಧಿಯಲ್ಲಿ ಆತನನ್ನು ಅದೇ ಸ್ಥಳದಲ್ಲಿ ಮತ್ತೆ ಒಂದೆರಡು ಸಾರೆ ದೂರದಿಂದ ಕಂಡೆನಾದರೂ ಅವನ ಹತ್ತಿರ ಹೋಗಲಿಲ್ಲ. ಬಳಿಕೊಂದು ಸಾರೆ ಆತನು ನನ್ನನ್ನು ನೋಡಿ, ತಾನಾಗಿಯೇ ಕೈಮಾಡಿ ಕರೆದು, ಇಷ್ಟು ದಿನಗಳಲ್ಲಿ ಒಮ್ಮೆಯೂ ನೀನು ನನ್ನನ್ನು ತಿರುಗಿ ಮಾತನಾಡಿಸಲಿಲ್ಲವಲ್ಲಾ! ಏಕೆ? ಎಂದನು. ಅದಕ್ಕೆ ನಾನು ನನಗೆ ಅನಿಸಿರುವದನ್ನೆಲ್ಲ ಸ್ಪಷ್ಟವಾಗಿ ಹೇಳಿದೆ. ಆಗ ಅವನು - ಹಾಗಾದರೆ ನಿನಗೆ ಸಂನ್ಯಾಸಿಯಾಗಬೇಕೆಂದೇ ಅನಿಸುವ ದೇನು? ಎಂದು ಕೇಳಿದನು. ನಾನದಕ್ಕೆ 'ಅದರಿಂದ ನನಗೆ ಈಶ್ವರ ದರ್ಶನವಾಗುವದಾದರೆ, ಅವಶ್ಯವಾಗಿ ಸಂನ್ಯಾಸಿಯಾಗಬೇಕೆನ್ನು ವೆನೆ'ಂದೆ.

"ಆಗ ಆತನು ನನ್ನನ್ನು ತನ್ನ ಬಳಿಯಲ್ಲಿಟ್ಟುಕೊಳ್ಳಲೊಪ್ಪಿ ಕೊಂಡು, ನಮ್ಮೂರ ಅಡವಿಯಲ್ಲೇ ಇರುವ ಒಂದು ಹಾಳು

ದೇಗುಲಕ್ಕೆ ಕರೆದುಕೊಂಡು ಬಂದು, ಒಂದು ದಿನ ರಾತ್ರಿ ನನ್ನ ಮೈಮೇಲಿನ ಬಟ್ಟೆಗಳನ್ನೆಲ್ಲ ಹರಿದು, ಸ್ಮಶಾನದೊಳಗಿನ ಹೆಣದರಿವೆಯಿಂದ ಶಾಟಿಯನ್ನು ಸಿದ ಪಡಿಸಿಕೊಟ್ಟನು.

"ಬಳಿಕ ಹುಟ್ಟಿದೂರಲ್ಲೇ ಭಿಕ್ಷೆಗೆ ಕಳಿಸಿದನು. ಒಮ್ಮೊಮ್ಮೆ ಇರುಳಲ್ಲಿ ಒಂಟಿಗನಾಗಿ ಸ್ಮಶಾನಕ್ಕೆ ಹೋಗಲಿಕ್ಕೆ ಹೇಳುತ್ತಿದ್ದನು. ನಾನು ಆ ಕೆಲಸದಲ್ಲಿ ಠಕ್ಕುತನ ಮಾಡಬಹುದೆಂದು ಪರೀಕ್ಷಿಸುವದಕ್ಕೆ ಬೇರೆ ಹಾದಿಯಿಂದ ನನಗಿಂತ ಮೊದಲೇ ತಾನು ಸುಡಗಾಡಿಗೆ ಹೋಗಿ ನನ್ನ ದಾರೀ ನೋಡುತ್ತ ನಿಲ್ಲುತ್ತಿದ್ದನು.

"ಬಳಿಕ ಕೆಲ ದಿನಗಳ ಮೇಲೆ ನನ್ನ ಸ್ವಂತದ ಊರನ್ನು ಬಿಡಿಸಿ, ಪರಪ್ರಾಂತಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ಒಂದು ಗುಡ್ಡದ ಕೊಳ್ಳದಲ್ಲಿ ವಸತಿಯನ್ನು ಮಾಡಿದನು. ಅವನ ಗುಡಿಸಲು ಗುಡ್ಡದ ತುದಿಯ ಮೇಲೆ, ನನ್ನದು ಕೆಳಗೆ ಕೊಳ್ಳದಲ್ಲಿ. ಆ ಭಯಂಕರವಾದ ಇರುಳನ್ನು ಒಬ್ಬನೇ ಕಳೆಯುವದೆಂದರೆ, ಪ್ರಾಣಸಂಕಟವೇ ಬಂದಂತಾಗುತ್ತಿತ್ತು; ಮೇಲಾಗಿ ಅಷ್ಟರಲ್ಲಿ ಅಲ್ಲಿಯ ಕೆಟ್ಟಹವೆಯಿಂದ ಮಲೇರಿಯದ ಜ್ವರವು ಬೇರೆ ಹಿಡಿದುಕೊಂಡಿತು.

"ಅಂಥಾದ್ದರಲ್ಲಿ ಒಂದು ದಿನ ರಾತ್ರಿ ಕಾಡೊಳಗಿನ ಕ್ರೂರ ಮೃಗವೊಂದು ಬಂದು, ನನ್ನ ಗುಡಿಸಲ ಮುಂದೆ ಗುಡುಗು ಹಾಕುತ್ತ ನಿಂತದನ್ನು ಕಣ್ಣಾರೆ ಕಂಡೆ. ಆಗ ನನ್ನ ಇತಿಶ್ರೀ ಆಯಿತೆಂದು ತಿಳಿದುಕೊಂಡೆನು. ಬಾಯಿಗೆ ಮಾತೇ ಬಾರದಾದವು. ಅಷ್ಟರಲ್ಲಿ ಅದು ತಾನಾಗಿ ಯಾವ ಕಡೆಗೊ ಹೋಗಿ ಬಿಟ್ಟಿತಾದರೂ ನನಗೇನೊ ಅತ್ತಿತ್ತ ಸರಿದಾಡಲಿಕ್ಕೆ ಕೂಡ ಧೈರ್ಯಬರಲಿಲ್ಲ. ಆದರೆ ಅದರ ಗುಡುಗಿಗೆ ಎಚ್ಚತ್ತು ಆ ಸಾಧುವು, ಆ ಕಾಳರಾತ್ರಿಯಲ್ಲಿ ನನ್ನೆಡೆಗೆ ಬಂದು, 'ಧೈರ್ಯವಾಗಿ ಇರು' ಎಂದು ಹೇಳುತ್ತ ಮಾತನಾಡಿಸಿದನು.

"ಅವನನ್ನು ಕಂಡಕೂಡಲೆ ನನ್ನ ದುಃಖವು ತುಂಬಬಂದಿತು. ಬೋರಾಡಿ ಅಳಹತ್ತಿದೆನು. ನನ್ನ ಜನ್ಮವು ವ್ಯರ್ಥವಾಯಿತಲ್ಲ, ನನಗೆ

ಏನು ಮಾಡಿಯೂ ಏನೂ ಫಲವಾಗಲಿಲ್ಲವಲ್ಲಾ ! ಎಂದು ಗೋಳಿಟ್ಟೆನು. ಅದಕ್ಕೆ ಆತನು ಇನ್ನಷ್ಟು ಗದ್ದರಿಸಿ ಈಗಲೇ ಇಲ್ಲಿಂದ ಹೊರಟು ನಿನ್ನೂರ ದಾರಿಯನ್ನು ಹಿಡಿಯೆಂದು ಹಟಹಿಡಿದನು. ಆಗ ನನ್ನ ಜೀವಕ್ಕೆ ಎಷ್ಟು ಕೆಡಕೆನಿಸಿತೆಂಬದನ್ನು ಹೇಳಲಾಸಲ್ಲ. ನನ್ನನ್ನು ಸರ್ವವಿಧದಿಂದಲೂ ಈತನು ಹಾಳು ಮಾಡಿ ಬಿಟ್ಟನಲ್ಲಾ ! ಎಂದು ಮರಮರನೆ ಮರುಗಿದೆ. ಕಸಾರಿಕೆ ಗುಣವಾದ ಮೇಲಾದರೂ ಹೊರಡುವೆನೆಂದರೆ ಕೇಳಲಿಲ್ಲ. ಕೊನೆಗೆ ಬೇಗಾದ ಮೇಲೆ ಹೋಗುವೆನೆಂದರೆ ಅದಕ್ಕೂ ಒಪ್ಪಲಿಲ್ಲ.

" ಹೊರಟೆ ! ಬಂದೆ ! ನಮ್ಮೂರ ಹಾಳುದೇಗುಲಕ್ಕೆ ತಲೆ ಕೊಟ್ಟೆ. ಕೆಲವುದಿನಗಳಲ್ಲಿ ಜಡ್ಡು ಗುಣವಾಯಿತು. ಆಗಿಯಾದರೂ ಏನು ಮಾಡುವನು ? 'ತಿರುಕ ಬೈರಾಗಿಯಾಗಿರುವದಕ್ಕಿಂತ ಹೆಚ್ಚಿಗೆ ನನ್ನ ದೈವದಲ್ಲಿ ಇನ್ನೇನೂ ಇರಲಿಲ್ಲವೇ ?' ಎಂದು ದುಃಖಿಸಿದೆ. ಆಯಿತು. ಅಲ್ಲೇ ಇದ್ದೆ, ಬಿಕ್ಕೇ ಬೇಡಿದೆ. ಮುಂದೇನು ? "

" ಒಂದು ದಿನ ಹೊತ್ತು ಮುಳುಗುವ ಸಮಯದಲ್ಲಿ ನಾಸಿದ್ದ ಆಡವಿಯ ದೇಗುಲಕ್ಕೆ ಬಂತು—ಅದೇ ಆ ಸ್ವಾರಿ !!! ಮಗನೇ ಈಗ ನಿನ್ನ ದೈವ ತೆರೆಯಿತು ಬಾ ! ನಿನ್ನ ಸಲುವಾಗಿ ನನಗೆ ದೃಷ್ಟಾಂತವಾಗಿ ನಾನಿಲ್ಲಿಗೆ ಬಂದೆ ! ' ಎಂದು ಗಂಭೀರವಾದ ಧ್ವನಿಯಿಂದ ಮುಂದಕ್ಕೆ ಕರೆದು, ಮಸ್ತಕದ ಮೇಲೆ ಹಸ್ತವನ್ನಿಟ್ಟರು. ಅಹಾ !!! ಅದೆಂಥಾ ವಿಲಕ್ಷಣವಾದ ಆನಂದವು !!! ನನ್ನಮೇಲೆ ಸ್ಮೃತಿಯೇ ಉಳಿಯಲಿಲ್ಲ. ಹಾಗೇ ಬಾಹ್ಯಸ್ಮೃತಿಯಿಲ್ಲದೆ ಐದಾರು ದಿನಗಳು ಕಳೆದವು !!

" ಕೊನೆಯ ದಿನ ಎಚ್ಚರವಾದ ಮೇಲೆ. ಜೀವಕ್ಕೆ ಕಣ್ತೆರೆದು ಈ ಲೋಕವನ್ನೇ ನೋಡುವದಕ್ಕೆ ಒಲ್ಲೆನಿಸಹತ್ತಿತು. ನನಗೆ ಅದೇ ಆ ಆನಂದದಲ್ಲೇ ಮಗ್ನನಾಗಿರಬೇಕೆಂದು ಅನಿಸಹತ್ತಿತು. ಆದರೆ ಮನ

ದಲ್ಲಿದ್ದ ನನ್ನ ಹಿಂದಿನ ಸಂದೇಹಗಳೆಲ್ಲಾ ಇದರಿಂದ ತಾನಾಗಿಯೇ ಬೈಲಾಗಿ ಹೋಗಿದ್ದವು ! ಅಂತಃಕರಣಕ್ಕೆ ಅನಿರ್ವಚನೀಯವಾದ ಒಂದು ಹೊಸ ಸಂಸ್ಕಾರವಾಗಿತ್ತು.

" ಆಗ ನಾನು ಅವರಿಗೆ—ಆದೇ ಸ್ಥಿತಿಯು ನನಗೆ ಅವಿಚ್ಛಿನ್ನ ವಾಗಿ ಉಳಿಯುವಂತೆ ಮಾಡಿರೆಂದು ಬೇಡಿಕೊಂಡೆ. ಅದಕ್ಕೆ ಅವರು-ಹಾಗೆಂದಿಗೂ ಆಗದಪ್ಪಾ ! ಆ ದಿವ್ಯಾನಂದದ ಸಿಂಹವನ್ನು ಕೆರಳಿಸಿ, ಎಬ್ಬಿಸಿಕೊಡುವುದಕ್ಕಷ್ಟೇ ಅನ್ಯರಿಂದಾಗುವುದೇ ಏನಾ, ಅದು ತಿರುಗಿ ತನ್ನ ಗುಹೆಯಲ್ಲಿ ಸೇರಿದ ಮೇಲೆ ಸಾಧಕನು ತಾನೇ ತನ್ನ ಜೀವಮಾನದಲ್ಲೆಲ್ಲಾ ಯತ್ನಪಟ್ಟು, ದುಡಿದು ದೊರಕಿಸಬೇಕಾಗು ವದು. ಸಹಾಯಕನು ಮುಂದೆ ಮಾರ್ಗದರ್ಶಕನಾಗಬಹುದು— ಅಷ್ಟೇ-ಎಂದು ನುಡಿದರು.

" ಅಂತೂ ಅಂದಿಗೆ ನಾನು ಧನ್ಯನು ! ಅಂದಿನ ಆ ದಿವ್ಯಾನಂ ದವು ನನ್ನ ಜೀವನದಲ್ಲಿ ಈ ವರೆಗೂ ತಿರುಗಿ ಬರಲಿಲ್ಲವಾದರೂ, ನನ್ನ ಪೂರ್ವಾಶ್ರಮದ ಸಂಶಯದ ಚಿತೆಯು ಒಮ್ಮೆ ಕಡೆತನಕ ಆರಿ ಹೋಯಿತು ! ನನ್ನ ಅಂತಃಕರಣದಲ್ಲಿ ಆ ದಿವ್ಯಕ್ಷಣದ ಮುದ್ರೆಯು ಇಂದಿಗೂ ಅಳುಕದೆ ಇದೆ !

" ಆತ್ಮದ ಒಳಗಿನ ಒಳಗಿನ ಕೋಣೆಯಲ್ಲಿ ಸಿಂಹದ ಗುರು ಕೆಯು ಕೇಳಿಸುತ್ತಿದೆಯಾದರೂ, ಹೊರಬಾಗಿಲಲ್ಲಿ ಬೆಕ್ಕುನಾಯಿಗಳು ಇನ್ನೂ ಸುಳಿದಾಡುತ್ತಲೇ ಇವೆ ! ಮನಸ್ಸಿನ ಎಷ್ಟೋ ವಿಕಾರಗಳು ಬರುತ್ತವೆ, ಹೋಗುತ್ತವೆ-ನಡೆದೇ ಇದೆ. ಆದರೂ ಗರ್ಭಗುಡಿಯೊಳ ಗಿನ ಜಾಗ್ರತಿಗೆ ಹಿಗ್ಗುಹಚ್ಚಿಕೊಂಡು, ಹೊರಗಿನ ಉಪಟಳಕ್ಕೆ ಉದಾಸೀನನಾಗಿದ್ದೇನೆ.

" ನನ್ನ ಸಿಂಹವು ನನಗೇ ತಿರುಗಿ ಹೊರಬೀಳದಿರುವಾಗ ಅನ್ಯರ ಗುಹೆಯೊಳಗಿನ ಸಿಂಹವನ್ನೆಬ್ಬಿಸುವದಕ್ಕೆ ನನ್ನಿಂದಾಗಲಾರ

ದೆಂಬವನ್ನರಿತೇ ನಾನು, ಲೋಕಾಂತದಿಂದ ಬಹುದೂರದಲ್ಲಿ ಬಂದು ವಾಸಮಾಡಿಕೊಂಡು ಇದ್ದೇನೆ. ಸಾಧಕಜೀವಿಗಳಿಗೆ ಬರಿ ಬಾಯಿ ಮಾತಿನಿಂದ ಹಸಿವು ಹಿಂಗಲಾರದೆಂಬುದನ್ನೂ ನಾನು ತುಂಬಾ ಬಲ್ಲೆನು. ಅವರ ಆ ಹಸಿವನ್ನು ಹಿಂಗಿಸುವದಕ್ಕೆ ಸಮರ್ಥನಿಲ್ಲದ ನಾನು, ಅಂಥವರ ಕಣ್ಣಿಗೆ ಬೀಳಬಾರದೆಂದು ಇಂಥಲ್ಲಿ ವಾಸಮಾಡಿಕೊಂಡು ಇದ್ದೇನೆ. ಹೀಗೆಂದ ಬಳಿಕ ನನ್ನಿಂದ ನಿನಗೆ ಹೆಚ್ಚಿನ ಉಪಯೋಗವೇನೂ ಆಗಲಾರದು. ನಿನ್ನ ಕಾಲವನ್ನು ಕಾದುಕೊಂಡು ಸಾವಧಾನದಿಂದ ಇರು-ಎಂದು ಮಾತ್ರ ಹೇಳುವೆನು.''

ಈ ರೀತಿಯಾಗಿ ಹೇಳಿ, ಆ ಶುದ್ಧಾಂತಃಕರಣದ ಯತಿಯು ಸುಮ್ಮನಾದನು. ಹೃದಯಪೂರ್ವಕವಾದ ಸತ್ಯಾಲಾಪದಲ್ಲಿ ಪರಿಣಾಮಕಾರಕ ಶಕ್ತಿಯಿರುವದೆಂಬ ಮಾತು ಈಗ ನಮ್ಮ ನಾಯಕನಿಗೆ ಮನಗಂಡು ಹೋಯಿತು.



## ೧೦. ಸಾಧನಪ್ರಯತ್ನ

ಜ್ಞಾನಭಿಕ್ಷುವಿಗೆ ಈಗ ರಾಮಕೃಷ್ಣ ವಿವೇಕಾನಂದರ ಆ ಕೊನೆಯ ಮಧುರದುಃಖದ ಅರ್ಥವಾಯಿತು. ಮುಂದೆ ವಿವೇಕಾನಂದರು ಆ ಪರಿ ಸಿಡಿಮಿಡಿಗೊಂಡಿದ್ದರ ಕಾರಣವೂ ಗೊತ್ತಾಯಿತು.* "ಸಾಧಕನಿಗೆ ಸಹಾಯಕನು, ಸತ್ಯದ ಸ್ವಧಾಮದ ಬಾಗಿಲನ್ನು ಒಮ್ಮೆ ತೆರೆದು ತೋರಿಸಲಿಕ್ಕೆ ಮಾತ್ರ ಸಮರ್ಥನಲ್ಲದೆ, ಅದು ಮುಂದೆ ಮತ್ತೆ ಮುಚ್ಚಿಕೊಂಡಾಗ ಆತನು ಬರಿ ಮಾರ್ಗದರ್ಶಕನು ಮಾತ್ರ ಆಗಬಲ್ಲನು." ಎಂಬ ಮಾತು ತಿರುಗಿ, ಈತನನ್ನು ಪರಮಹಂಸರ ಹಾಗೂ ವಿವೇಕಾನಂದರ ವಿಷಯದಲ್ಲಿ ಶ್ರದ್ಧೆಯುಳ್ಳವನನ್ನಾಗಿ ಮಾಡಿತು. 'ಸ್ವಾಮಿಶಿಷ್ಯ ಸಂವಾದ' ವೆಂಬ ಪುಸ್ತಕದಲ್ಲಿ ವಿವೇಕಾನಂದರು ಮುಂದೆ ತಮಗೆ ಹೇಗೆ ದಿವ್ಯಾನುಭವಗಳಾಗ ಹತ್ತಿದವೆಂಬದನ್ನು ತಾವೇ ಹೀಗೆ ವರ್ಣಿಸಿರುವರು.—

"ನಾನು ಅಮೇರಿಕೆಯಲ್ಲಿದ್ದಾಗ ಅಲ್ಲಿ ಪ್ರತಿ ದಿವಸ ತಪ್ಪದೆ ಒಮ್ಮೆಯೋ ಎರಡು ಸಾರೆಯೋ ಒಮ್ಮೊಮ್ಮೆ ಅದಕ್ಕಿಂತಲೂ ಹೆಚ್ಚು ಸಲವೋ ವ್ಯಾಖ್ಯಾನಗಳನ್ನು ಕೊಡಬೇಕಾಗುತ್ತಿತ್ತು.

---

* ಮಹಾಕವಿಯಾದ ಡಾಂಟೇನ ಮಹಾಕಾವ್ಯವಾದ "ದಿವ್ಯದೃಶ್ಯ ಅಥವಾ ಡಿವ್ಹಾಯಿನ್ ಕಾಮೆಡಿ" ಯಲ್ಲಿ ಅವನ ಗುರುವಾದ ವ್ಹರ್ಜಿಲ್‌ನು ಅವನನ್ನು ಸಪ್ತಭೂಮಿಕೆಗೇರಿಸಿದ ಬಳಿಕ ಅವನಿಗೆ ಹೇಳುವದೇನಂದರೆ—

"I, with skill and art, thus far have drawn thee. Now thy pleasure take for guide. Expect no more sanction of warning voice or sign from me"

"ನಾನು ನಿನ್ನನ್ನು ಇಲ್ಲಿಯ ವರೆಗೆ ಬಹುಕುಶಲತೆಯಿಂದ ತಂದು ಬಿಟ್ಟಿರುವೆನು. ಇನ್ನು ಮುಂದೆ ನಿನ್ನ ಆನಂದವೇ ನಿನಗೆ ಗುರುವು. ನನ್ನಿಂದ ಯಾವ ತರಹದ ನೆರವನ್ನೂ ಇನ್ನು ನೀಲಿ ನಿರೀಕ್ಷಿಸಬೇಡ."

ದಿನಾಲು ಹೊಸ ವಿಷಯಗಳನ್ನು ಎಷ್ಟೆಂದು ಹೇಳಬೇಕು ! ಆದರೆ ಹೇಳದೆ ಬಿಡಲಿಕ್ಕೆ ಶಕ್ಯವಿರಲಿಲ್ಲ. ಏನು ಮಾಡಬೇಕು ! ಕೊನೆಗೆ ಇನ್ನು ಹೊಸ ವಿಷಯವೆಂಬುದು ಸಿಕ್ಕುವದಕ್ಕೆ ಸಾಧ್ಯವಿಲ್ಲವೆನ್ನು ವಂತಾಯಿತು. ಆದರೂ ಸಿಮಂತ್ರಣಗಳಿಗೇನೂ ತಡೆಯಿಲ್ಲವೇ ಇಲ್ಲ! ಏನು ಮಾಡಬೇಕು !! ಆ ದೇಶಕ್ಕೆ ಏಕೆ ಹೋದೆನೆನ್ನುವಂತಾಯಿತು. ಆದರೂ ಹೇಳಿಯೇ ತೀರಬೇಕಲ್ಲಾ !! ಇನ್ನೇನುದಾರಿಯೆಂದು ಆಲೋಚಿಸಿ-ಆಲೋಚಿಸಿ ಸಾಕಾಯಿತು. ಆ ಯೋಚನೆಯು ನಡೆದಿದ್ದಾಗಲೇ ಹಾಗೇ ನಿದ್ದೆಹತ್ತಿ ಬಿಟ್ಟಿತು. ಕೂಡಲೇ ಸ್ವಪ್ನ ! ಯಾರೋ ನಿಂತು ವ್ಯಾಖ್ಯಾನ ಕೊಡುತ್ತಿದ್ದರು !! ಆಹಾ ! ಅದೆಂಥಾ ಹೊಸ ವಿಷಯವು !!! ನಾನು ನನ್ನ ಜನ್ಮದಲ್ಲೇ ಆ ವಿಚಾರಗಳನ್ನು ಕಲ್ಪಿಸಿರಲಿಲ್ಲ – ಕೇಳಿರಲಿಲ್ಲ -- ಕಂಡಿರಲಿಲ್ಲ—ಉಂಡಿರಲಿಲ್ಲ !!! ಅಷ್ಟು ಹೊಸ ವಿಷಯವು ! ಹೇಗೆ ಕನಸಿನಲ್ಲಿ ಕೇಳಿದೆನೋ ಹಾಗೆಯೇ ಸಭೆಯಲ್ಲಿ ಹೇಳಿದೆ !! ಇದೇ ಪ್ರಕಾರ ಸ್ವಪ್ನದಲ್ಲಿ ಕೇಳಿ, ವ್ಯಾಖ್ಯಾನದಲ್ಲಿ ಹೇಳಿದ ದಿವಸಗಳಿಗೆ ಲೆಕ್ಕವಿಲ್ಲ ! ''

ನಮ್ಮ ಬುದ್ಧಿಯು ನಮಗೆ ಸಾಧಕವೂ ಆಗಿದೆ, ಬಾಧಕವೂ ಆಗಿದೆ. ಅದು ಬಾಧಕವಾಗುವತ್ತಿತೆಂದರೆ ಅದರ ನಿರೋಧವು ಆವಶ್ಯಕವಾಗಿರುತ್ತದೆ. ನಿರೋಧದಲ್ಲಿ ಎರಡು ವಿಧ. ನಾವಾಗಿ ಮಾಡುವದೊಂದು–ತಾನಾಗಿ ಆಗುವದು ಮತ್ತೊಂದು. ನಾವಾಗಿ ಮಾಡುವದು ಸಾಧನಮೂಲಕ, ತಾನಾಗಿ ಆಗುವದು ಪರಿತಾಪಮೂಲಕ. ವಿವೇಕಾನಂದರಿಗೆ ಇನ್ನು ಬುದ್ಧಿಯೆಂಬುದು ನಡೆಯುವದೇ ಅಸಾಧ್ಯವಾಗಿ ಈ ಅವಸ್ಥೆಗೆ ಬಂದಿತು. ಆದರೆ ಅರವಿಂದರು, ಈ ಬುದ್ಧಿಯೆಂಬುದನ್ನು ಬೇಕೆಂತಲೇ ಬರಿದಾಗಿಸಿ, ಅದರಿಂದಾದ ಅನುಭವವನ್ನು ತಮ್ಮ “ ಅರವಿಂದ ಮಂದಿರೇ ” ಎಂಬ ಗ್ರಂಥದಲ್ಲಿ ಹೀಗೆ ವಿವರಿಸಿರುವರು:—

" ಪ್ರಾಣಬುದ್ಧಿಗಳಲ್ಲಿ ತೆರೆಗಳೇಳುವದು ನಿಂತರೆ, ಒಳಗೆ ಒಂದು ಅಖಂಡ – ಪ್ರಶಾಂತಸ್ಥಿತಿಯುಂಟಾಗುವದು. ಆದರೆ ಹೀಗೆ ಮಾಡುವದೊಂದು ಕಲೆಯಿದೆ. ಆ ಕೌಶಲ್ಯವನ್ನು ನನಗೆ ' ಲೇಲೇ ' ಅವರು ಹೇಳಿಕೊಟ್ಟರು. ನಾನು ಹಾಗೆ ಮಾಡಿದೆ. ಮೂರು ದಿನಗಳಲ್ಲೇ ಒಳಗೆ ಪ್ರಾಣಬುದ್ಧಿಮನಗಳೆಲ್ಲ ನಿಸ್ತರಂಗಿತವಾಗಿ ವಿಚಾರಕ್ಷೇತ್ರನೆಂಬದೆಲ್ಲಾ ತುಂಬಾ ಬರಿದಾಯಿತು. ಆಗ ಅಂಥಾದ್ದರಲ್ಲಿ ಒಂದು ವ್ಯಾಖ್ಯಾನಕೊಡಬೇಕಾದ ಪ್ರಸಂಗವೂ ಬಂತು. ಆದರೆ ಒಳಗೆ ಏನಿದೆ ? ತುಂಬಾ ಬರಿದು; ಇದಕ್ಕೇನು ಹೇಳುವರೆಂದು ಲೇಲೆಯವರನ್ನು ಕೇಳಿದೆನು. ಅದಕ್ಕವರು—ಏನೂ ಆಲೋಚಿಸಬೇಕಾಗಿಲ್ಲ. ಆಗ ಏನು ಹೇಳಬೇಕಾಗಿದೆಯೋ ಅದೆಲ್ಲವನ್ನೂ ಒಳಗಿನಿಂದ ತಾನಾಗಿಯೇ ಹೇಳುವದು. ಎಂದರು. ಆಯಿತು—ಹಾಗೇ ಆಯಿತು. ಅಂದಿನ ವ್ಯಾಖ್ಯಾನವು ನನ್ನ ಹಿಂದಿನ ಎಂದಿನ ವ್ಯಾಖ್ಯಾನದಂತೆಯೂ ಇರಲಿಲ್ಲ. ವಿಷಯ ಹೊಸದು, ವಿಚಾರ ಹೊಸದು, ರೀತಿ ಹೊಸದು, ಮಾತು ಹೊಸದು; ಒಟ್ಟಾರೆ ಅದರಲ್ಲಿ ನನ್ನದೆನ್ನುವಂಥಾದ್ದೇನೇನೂ ಇದ್ದಿದ್ದಿಲ್ಲ. ಹಾಗೇ ಹಾದಿಗುಂಟ ವ್ಯಾಖ್ಯಾನವನ್ನು ಹೇಳುತ್ತ ಬಂದೆನೆಂದು, ನನಗೆ ಹಿಂದಿನಿಂದ ಕೈಯಲ್ಲಿದ್ದ ಚೀಟಿಯಿಂದ ಗೊತ್ತಾಯಿತು. ಆ ಕಾಲದಲ್ಲಿ ಈ ಸ್ಥಿತಿಯು, ಅಸ್ವಾಭಾವಿಕವೆಂದೂ, ದಿನದ ಸ್ಥಿತಿಯೇ ಸಹಜನೆಂದೂ ಅನಿಸುತ್ತಿತ್ತು. ಆದರೆ ಪಾಂಡೀಚೇರಿಗೆ ಬಂದ ಬಳಿಕ, ಇದೇ ನನಗೆ ಸ್ವಾಭಾವಿಕವಾಗಿ ಬಿಟ್ಟಿದೆ. ಈಗ ತರ್ಕಬುದ್ಧಿಯಿಂದ ಏನೂ ಆಗುವದಿಲ್ಲ–ಮಾತಾಡುವದಿಲ್ಲ. ಎಲ್ಲವೂ ಮೇಲಿನಿಂದಲೇ ಬರುತ್ತದೆ. "

ಯಾವ ವಿಧದಿಂದಾದರೂ ಅಷ್ಟೇ, ಮೇಲಿನ ಮಾತುಗಳೊಳಗೆ ವಿವೇಕಾನಂದರ ಅನುಭವದಲ್ಲಿಯೂ, ಅರವಿಂದರ ಅನುಭವದಲ್ಲಿಯೂ ಏಕವಾಕ್ಯತೆಯಿದೆ. ಕ್ರಿಸ್ತನು ತನ್ನ ಶಿಷ್ಯರಿಗೆ— " ನಿಮ್ಮನ್ನು

ನ್ಯಾಯಸಭೆಗೆಳೆದಾಗ ಅಲ್ಲಿ ನೀವೇನು ಹೇಳಬೇಕೆಂಬದನ್ನು ಮೊದಲೇ ಆಲೋಚಿಸಬೇಡಿರಿ. ಏನು ಹೇಳಬೇಕಾಗಿದೆಯೋ ಅದನ್ನು ಪವಿತ್ರಾತ್ಮನು ಆಗ ತಾನೇ ಹೇಳಿಕೊಡುವನು." ಎಂದು ಬೋಧಿಸುವದರ ಅರ್ಥವಾದರೂ ಇದೇ ಆಗಿದೆ. "ನಿರ್ವಿಚಾರ ವೈಶಾರದ್ಯೇ ಅಧ್ಯಾತ್ಮ ಪ್ರಸಾದಃ" ಎಂಬ ಪತಂಜಲಿ ಮುನಿಗಳ ವಾಕ್ಯವೂ ಈ ಅರ್ಥವನ್ನು ಒಳಗೊಳ್ಳದೆ ಇಲ್ಲ. ರಾಮಕೃಷ್ಣರ ಈ ಕೆಳಗಿನ ವಚನಗಳ ಅಭಿಪ್ರಾಯ ವಾದರೂ ಹೀಗೇ ಇದೆಯೆಂಬದು ಸ್ಪಷ್ಟ:—

"**ಮನಸ್ಸು ಶಾಂತವಾಗಲು ದೇವರು ಪ್ರತ್ಯಕ್ಷನಾಗುತ್ತಾನೆ.** ಬಿರುಗಾಳಿಯಿಂದ ಹೃದಯಸಮುದ್ರವು ಅಲ್ಲೋಲ ಕಲ್ಲೋಲವಾದಾಗ ಅದರಲ್ಲಿ ಭಗವಂತನ ಪ್ರತಿಬಿಂಬವು ಕಾಣದೆ ಅತನನ್ನು ಸಾಕ್ಷಾತ್ಕಾರಮಾಡಿಕೊಳ್ಳುವುದು ಅಸಾಧ್ಯವಾಗುತ್ತದೆ.

"ಗಾಂಜಾ–ಗಾಂಜಾ" ಎಂದು ಸುಮ್ಮನೆ ಕೂಗಿಕೊಂಡ ಮಾತ್ರಕ್ಕೆ ಗಾಂಜಾದ ಅಮಲು ಏರುವದೇನು? ಅದನ್ನು ತಂದು, ಅರೆದು ಕುಡಿದ ಹೊರತು ಮದವುಂಟಾಗುವದಿಲ್ಲ. ಈ ಪರಿಯಾಗಿ 'ಓ ದೇವರೇ, ಓ ದೇವರೇ' ಎಂದು ಸುಮ್ಮನೆ ಗಟ್ಟಿಯಾಗಿ ಕೂಗಿಕೊಳ್ಳುವದರಿಂದ ಪ್ರಯೋಜನವೇನು? **ತಪ್ಪದೆ ಕ್ರಮವಾಗಿ ಉಪಾಸನೆಯನ್ನು ಮಾಡುವಿಯಾದರೆ ದೇವರು ನಿನಗೆ ನಿಜವಾಗಿಯೂ ಪ್ರತ್ಯಕ್ಷನಾಗುವನು.**"

ಗೀತೆಯು ಕೂಡ ಇದನ್ನೇ ಸಮರ್ಥಿಸಿ, ಇಡೀ ಆರನೇ ಅಧ್ಯಾಯವನ್ನು ಈ '**ಅಭ್ಯಾಸಯೋಗ**'ಕ್ಕಾಗಿಯೇ ಕಾದಿಟ್ಟುಕೊಂಡಿದೆ.

ಕಣ್ಣು ನಮ್ಮ ದೇಹದ ಬೆಳಕಾಗಿರುವಂತೆ, ಮನವು ಅಂತಃಕರಣದ ಹೆಬ್ಬಾಗಿಲಾಗಿದೆ. ನಾವು ಹೊರಗಿನ ವಿದ್ಯಮಾನವನ್ನು ಅರಿಯಲೆಳಸಿದಾಗ ನಮ್ಮ ಕಣ್ಣು ಅದಕ್ಕೆ ಅನುಕೂಲವಾಗಿರಬೇಕಾದಂತೆ,

ಒಳಗಿನ ವಿದ್ಯಮಾನಗಳನ್ನು ಕಂಡುಕೊಳ್ಳುವದಕ್ಕೆ ಮನವು ನಿಸ್ತರಂಗಿತವಾಗಿರಬೇಕಾದದ್ದು ಅಗತ್ಯವಾಗಿದೆ. ಹೊಯ್ದಾಡುವ ಕೊಳದ ಮೇಲೆ ಪ್ರತಿಬಿಂಬಗಳು ಸರಿಯಾಗಿ ಮೂಡಲಾರವು. ಆದರೆ ಭಕ್ತ ಸಾಧಕರಿಗೆ ಇದರ ಮರ್ಮದ ಕಡೆಗೆ ಹೊರಳಿ ನೋಡಲಿಕ್ಕೆ ಅವರ ಹೃದಯವು ಅವರಿಗೆ ಅವಕಾಶವನ್ನೇ ಕೊಡುವದಿಲ್ಲ. ಸಂದೇಹವಾಗಿಗಳ ಬುದ್ಧಿಯೂ ಅಂಥಾದ್ದೇ ಆಗಿರುತ್ತದೆ. ಈ ಬುದ್ಧಿ, ಈ ಹೃದಯ ಇವು ತಮ್ಮ ದುರ್ದಮನೀಯ ವೇಗದಲ್ಲಿ ಸಾಧಕರನ್ನು ಎಳೆದಾಡಿ, ತರಗುಬರಗು ಮಾಡಿ ಬಿಡುತ್ತವೆ. ಆದರೆ ಹೃದಯಬುದ್ಧಿಗಳ ಜಾಗೃತಿಯಿಲ್ಲದೆ ಬರಿ ಈ ಮನೋಧರ್ಮದನ್ನುರತವರ ಹಣೆಬರಹವೂ ಹೀಗೇ ಆಗುತ್ತದೆ. ಅವರ ಸಾಧನವು ಆಶ್ಚರ್ಯಗಳ ಬೆನ್ನು ಹತ್ತಿ, ಅವರನ್ನು ಮೋಡಿಯಾಟದವರನ್ನಾಗಿ ಮಾಡಿ ಬಿಡುತ್ತದೆ.

ಇದೇನೇ ಇರಲಿ. ಅನುಭವಿಕ ಜ್ಞಾನಕ್ಕೆ ಬಾಹ್ಯಮಾನಸವು-ಸುಪರ್ ಫಿಶಲ್ ಮಾಯಂಡ್ - ನಿಸ್ತರಂಗಿತವಾಗಿ, ಅಂತರ್ಮಾನಸವು-ಸಾಯ್ಕಿಕಲ್ ಮಾಯಂಡ್-ಜಾಗೃತವಾಗಬೇಕಾದ ಅಗತ್ಯವು ಮಾತ್ರ ಮುಖ್ಯವಾಗಿ ಇದೆ. ಅದು ಸಾಧನದಿಂದಲೂ ಆಗಬಲ್ಲದು. ತಾನಾಗಿಯೂ ಆಗಬಹುದು. ಸಾಧನವೆಂಬದು ಯಾವಾಗಲೂ ತೋಟಗಾರಿಕೆಯಂತಿದೆ. ತಾನಾಗಿ ಅಡವಿಯಲ್ಲಿ ಬೆಳೆಯುವ ಸಸಿಗಳ ಬೀಜಗಳನ್ನು ಸಂಗ್ರಹಿಸಿ, ಇಲ್ಲಿ ತನಗೆ ಬೇಕಾದಂತೆ ಬೆಳೆಸಿಕೊಳ್ಳಲಿಕ್ಕೆ ಬರುವದು;ಆದರೆ ನಾವಾಗಿ ಮಾಡಬೇಕಾಗಿರುವದನ್ನು ಮಾಡಿ ತೀರಿಸುವದಕ್ಕೆ ನಮ್ಮ ಸ್ವಭಾವಗತದೋಷಗಳೇನಾದರೂ ವಿಘ್ನ ಮಾಡುತ್ತಿದ್ದರೆ, ಆಗ ವಿಶ್ವಪ್ರಕೃತಿಯು ನಮ್ಮ ಆ ಸ್ವಭಾವದೋಷಕ್ಕೆ ಇದಿರಾಗಿ, ದುರ್ಘಟಪ್ರತಿಕ್ರಿಯೆಗಳನ್ನು ಯೋಜಿಸಿ, ಅದನ್ನು ನಿರ್ಮೂಲನಗೊಳಿಸಿ, ಆಗಬೇಕಾದ ಕೆಲಸವನ್ನು ಆಗಿಸಿಯೇ ಬಿಡುತ್ತದೆ. ತಾನಾಗಿಯೇ ಆಗುವದೆಂದರೆ ಇದೇ. ನೋಡುವದಕ್ಕೆ ಇದೆ

ರಡೂ ಅತಿಭಿನ್ನವಾಗಿ ಕಾಣುವವಾದರೂ ಇವೆರಡೂ ಆ ವಿಶ್ವಪ್ರಕೃತಿ ಯುವೇ ಲೀಲೆಗಳು. ಒಂದರಲ್ಲಿ ಅದಕ್ಕೆ ಅನುಕೂಲವಾಗುವಂತೆ ನಮ್ಮ ಕ್ರಿಯಾಶಕ್ತಿಯು ಪ್ರಬಲವಾಗಿರುತ್ತದೆ. ಇನ್ನೊಂದರಲ್ಲಿ ದುರ್ಬಲವಾಗಿರುತ್ತದೆ. ಅಥವಾ ವಿಶ್ವಶಕ್ತಿಯು ಒಂದರಲ್ಲಿ ಬಲವಾಗಿ ಪ್ರತಿಫಲನವನ್ನು ಹೊಂದುತ್ತದೆ. ಇನ್ನೊಂದರಲ್ಲಿ ಬೇಗನೆ ಪರಾವರ್ತನ ಹೊಂದುವದಕ್ಕೆ ತಕ್ಕ ಆಧಾರವಿರುವದಿಲ್ಲ—ಇಷ್ಟೇ

ಅಂತೂ ಈಗ ನಮ್ಮ ನಾಯಕನು ಅರವಿಂದರ 'ವಿಚಾರ ನಿಸ್ತ-ರಂಗೀಕರಣ' ಪದ್ಧತಿಗೆ ಆಕರ್ಷಿತನಾದನು. ಒಂದು ಪ್ರತ್ಯೇಕವಾದ ಕೋಣೆಯನ್ನು ಏರ್ಪಡಿಸಿಕೊಂಡು,ಏಕಾಂತ ಸಾಧನವನ್ನು ಆರಂಭಿಸಿದನು. "ಸಮಂ ಕಾಯ ಶಿರೋಗ್ರೀವ" ನಾಗಿ ನೆಟ್ಟಗೆ ಕೂತುಕೊಂಡು ಭಗವದರ್ಥದ್ಯೋತಕವಾದ ಓಂಕಾರವನ್ನು ದಿನಾಲು ಇಂತಿಷ್ಟು ಹೊತ್ತೆಂದು, ಗೊತ್ತುಪಡಿಸಿಕೊಂಡಂತೆ ಜಪಿಸುತ್ತಲೂ, ಒಳಗೆ ಭಗವದರ್ಥವನ್ನು ಭಾವಿಸುತ್ತಲೂ ಬೇರೆ ವಿಚಾರಗಳು ಸುಳಿದರೆ ಫೂತ್ಕರಿಸಿ ಚದರಿಸುತ್ತಲೂ ಧ್ಯಾನವ್ಯವಸಾಯವನ್ನು ನಡೆಸಿದನು. ದಿನಾಲು ಒಂದು ತಾಸು ಈ ರೀತಿಯಿಂದ ಧ್ಯಾನಮಾಡಿದ ಮೇಲೆ, ಹಗಲ ಇನ್ನುಳಿದ ವೇಳೆಯಲ್ಲಿ – ಕೋಣೆಯನ್ನು ಇದ್ದಕ್ಕಿದ್ದಂತೆ ಮುಚ್ಚಿಕೊಂಡು, ಕಿಡಕಿಯನ್ನು ತೆಗೆದಿಟ್ಟು, ಇನ್ನಾವ ವಿಚಾರವನ್ನೂ ಮಾಡದೆ,ಭಾವಚಿತ್ರವೊಂದನ್ನು ನೋಡುತ್ತ ಕೂಡಹತ್ತಿದನು. ಆಗಲೂ ಬೇರೆ ವಿಚಾರಗಳು ಸುಳಿದರೆ ಫೂತ್ಕರಿಸಿ ಚೆದರಿಸುವನು. ಆದರೆ ಇದು ಬಹಳ ಹೊತ್ತಿನವರೆಗೆ ಸಮಾಧಾನವಾಗಿ ಸಾಗುತ್ತಿರಲಿಲ್ಲ. ಮನಸ್ಸು ಅತ್ಯಂತ ವ್ಯಗ್ರವಾಗಿ ಬಿಡುತ್ತಿತ್ತು.

ಭಕ್ತಸಾಧಕರ ಒಂದು ತೊಂದರೆಯೇನೆಂದರೆ – ಅವರು, ಭೌತಿಕ ನಿಯಮಗಳ ವಿಪರೀತತೆಯಿಂದುಂಟಾಗುವ ಸಹಜವಿಘ್ನಗಳನ್ನು ನಿವಾರಿಸಿಕೊಳ್ಳುವದಕ್ಕೆ, ಆ ನಿಯಮವು ಅಬಾಧಿತವಾಗಿ ಸಾಗುವ

ದಕ್ಕೆ ಎಲ್ಲಿ ತಪ್ಪುತ್ತಿದೆಯೆಂಬವನ್ನು ಪರಿಶೀಲಿಸುವಬದಲು–ಕೂಡಲೇ ವ್ಯಾಕುಲರಾಗಿ ದೇವನಲ್ಲಿ ಮೊರೆಯಿಡಲಾರಂಭಿಸುವರು. ಉದಾಹರಣೆ ಗಾಗಿ ಒಂದು ಮಾತನ್ನು ಹೇಳುವೆ. ಊಟಕ್ಕೆ ಕುಳಿತಾಗ ಅನ್ನದಲ್ಲಿ ಏನಾದರೂ ಕಸಕಡ್ಡಿ ಬಂತೆಂದು ತಿಳಿಯುವಾ. ಆಯಿತು. ಎದ್ದ ನೇನೋ, ಉಗುಳಿ ಒಂದು ಮತ್ತೆ ಉಂಡನೇನೋ. ಆದರೆ ಅದಕ್ಕೆ ಬದಲು – "ಅಯ್ಯೋ! ದೇವರೇ! ನನ್ನನ್ನೇಕೆ ಕಾಡುವಿ?!" ಎಂದೆ ನ್ನುತ್ತ ವ್ಯಾಕುಲಪಟ್ಟರೆ ಯಾರು ಈಡಾಗಬೇಕು? ಇದು ಭಕ್ತಿನಿರ್ಭ ರತೆಯಲ್ಲ; ಅಂಧಂತಮಸ್ಸು – ಜಡತ್ವ.

ಈಗ ನಮ್ಮ ನಾಯಕನು ಕೈಕೊಂಡ ಕಾರ್ಯವೋ ವಿಚಾರ ನಿಸ್ತರಂಗೀಕರಣ; ಆದರೆ ಮಾಡಹತ್ತಿದ್ದೋ ವ್ಯಾಕುಲಶೋಕ! ದೇವನ ಮೇಲೆ– ಒಮ್ಮೆ ಹರಿಹಾಯುವನು! ಒಮ್ಮೆ ತೂರಿಯೇಳು ವನು! ಇನ್ನೊಮ್ಮೆ "ತಂದೇ! ನನ್ನನ್ನು ಈ ಪರಿ ಪರೀಕ್ಷಿಸಬೇಡ, ತಾಳಲಾರೆ!" ಎಂದು ಬೋರಾಡಿ ಅಳುವನು. ಕೊನೆಗೆ ತಾನು ನಡಿ ಸಿರುವದೇನೆಂದು ಗೊತ್ತಾಗಲು, ಮತ್ತೆ ಚೇತರಿಸಿಕೊಂಡು ಎದ್ದು, ಮುಂದಿನುಪಾಯವನ್ನು ಕುರಿತು ಆಲೋಚಿಸುವನು.

ಅಂತೂ ಹೀಗೆ ಮೂರು ನಾಲ್ಕು ದಿನಗಳು ಕಳೆದ ಮೇಲೆ, ತಾನಾಗಿ ಒಂದು ಮಾತು ಹೊಳೆಯಿತು. ಅದೇನೆಂದರೆ – "ನನ್ನ ವ್ಯಥಿತಜೀವನದ ಮೂಲಕವೂ, ಅಬ್ರಹ್ಮಚರ್ಯದ ಮೂಲಕವೂ ನನ್ನ ಶಕ್ತಿಯೆಲ್ಲ ಕುಂದಿಹೋಗಿರುವದರಿಂದ, ಮನಸ್ಸಿನ ಮೇಲೆ ಪ್ರಭುತ್ವ ವಿಲ್ಲದಂತಾಗಿದೆ; ಈಗ ಅದರ ಮೇಲೆ ವೃಥಾ ಅತ್ಯಾಚಾರವನ್ನು ನಡೆಸುವದಕ್ಕಿಂತ ಏನಾದರೂ ಹಂಚಿಕೆಯನ್ನು ಹುಡುಕಿಕೊಂಡು, ಸಾಗಲಿಕ್ಕೆ ಬೇಕು. ಇಡೀ ದಿನವೆಲ್ಲ ಮನಸ್ಸನ್ನು ಒಂದೇ ಕೆಲಸದಲ್ಲಿ ತೊಡಗಿಸುವದಕ್ಕಿಂತ– ಒಂದು ತಾಸು ಮಾತ್ರ ಇದಕ್ಕಿಟ್ಟು, ಉಳಿದ ಕಾಲದಲ್ಲಿ ಅದಕ್ಕೆ ಪೋಷಕವಾಗುವ ಗ್ರಂಥಗಳನ್ನು ಒದುತ್ತಲಿರ

ಬೇಕು. ಮತ್ತು ಸೆಟ್ಟಿಗೆ ಕೂತುಕೊಳ್ಳುವದಕ್ಕೆ ನನ್ನ ಬೆನ್ನ ಹುರಿಗೆ ಶಕ್ತಿ ಸಾಲದಾದ್ದರಿಂದ ಆರಾಮ ಕುರ್ಚಿಯ ಮೇಲೆ ಒರಗಿಕೊಂಡು ಧ್ಯಾನಮಾಡಬೇಕು."

'ನಾಯಮಾತ್ಮಾ ಬಲಹೀನೇನ ಲಭ್ಯಃ' ಎಂಬ ಉಪನಿಷದ್ವಚನದ ಪ್ರತೀತಿಯು ನಮ್ಮ ನಾಯಕನಿಗೀಗ ಬಂತು. ಆದರೂ ನಿರಾಶೆಗೆ ಬದಲು, ಹಂಚಿಕೆ ಹೊಳೆದದ್ದರಿಂದ ಮತ್ತೆ ಉಳಿದುಕೊಂಡನು.

ತಣ್ಣೀರಲ್ಲಿ ಸ್ನಾನಮಾಡಿ, ಆರಾಮ ಕುರ್ಚಿಯ ಮೇಲೊರಗಿ, ಯಥಾಪ್ರಕಾರವಾಗಿ ಧ್ಯಾನವನ್ನಾರಂಭಿಸಿ, ಐದಾರು ಮಿನೀಟುಗಳಾಗುವದೇ ತಡ, ಅಷ್ಟರೊಳಗೆ ಇದ್ದಕ್ಕಿದ್ದಂತೆ ನಿದ್ರೆಹತ್ತಿ ಬಿಡುತ್ತಿತ್ತು. ಒಂದು ತಾಸು ನಿದ್ರೆ, ತಿರುಗಿ ಎಚ್ಚರಾದ ಮೇಲೆ ಏನೋ ಒಂದಿಷ್ಟು ವಿಶ್ರಾಂತಿಯಾದಂತೆ ಅನಿಸುತ್ತಿತ್ತೇ ಹೊರತು,ಬೇರೇ ಆಧ್ಯಾತ್ಮಿಕ ಪ್ರಗತಿಯ ಚಿಹ್ನಗಳೇನೂ ತೋರುತ್ತಿರಲಿಲ್ಲ. ಧ್ಯಾನದ ಫಲವು ಪೂರ್ಣತೆಗೆ ಬರಬೇಕಾದರೆ, ಇಂಥ ನಿದ್ರೆ ಬಾರದಂತೆ ಜಾಗರೂಕತೆಯನ್ನು ತೆಗೆದುಕೊಳ್ಳಬೇಕಾಗುವದೆಂಬದು, ನಮ್ಮ ನಾಯಕನಿಗೆ ಆಗ ಗೊತ್ತಾಗಲೇ ಇಲ್ಲ. ಹೀಗೇ ಆರು ತಿಂಗಳುಗಳ ವರೆಗೆ ಸಾಗಿತು. ಜೀವನದಲ್ಲಿ ಇನ್ನಾವ ಮಾರ್ಪಾಡೂ ಆಗಲಿಲ್ಲ. ಆದರೆ ಒಟ್ಟಾರೆ ಮಹಾ ವ್ಯಥಿತನಾದ ಈತನ ಮಿದುಳಿಗೆ ಒಂದು ಬಗೆಯ ವಿಶ್ರಾಂತಿಯಾದರೂ ಸಿಕ್ಕಿತೆಂದು ಧಾರಾಳವಾಗಿ ಹೇಳಬಹುದು.



# ೧೧. ಪ್ರಥಮಪರಿಚಯ.

ಧರ್ಮವೆಂಬ ಮಾತನ್ನೆತ್ತಿದರೆ ಈ ಮುಂದಿನ ಕೆಲವು ಮಾತು ಗಳಲ್ಲಿ ಒಂದಿಲ್ಲೊಂದರ ಸಂಬಂಧವು ತಪ್ಪದೆ ಬರುತ್ತದೆ.– (೧) ದೇವರು, (೨) ಪರಲೋಕ, (೩) ಆತ್ಮ, (೪) ಅಮರತ್ವ, (೫) ಕರ್ಮ, (೬) ಜನ್ಮಾಂತರ, (೭) ದಿವ್ಯಜ್ಞಾನ. ಜಗತ್ತಿನ ಯಾವ ಭಾಗದಲ್ಲಿ ನಡೆ ಯುವ ಒಂದು ಧರ್ಮವನ್ನು ತೆಗೆದುಕೊಂಡರೂ–ಅದು ಏನಿಲ್ಲವೆಂದರೂ ಬುದ್ಧಿಯಾಚೆಗಿನ ದಿವ್ಯಜ್ಞಾನವೆಂಬುದೊಂದು ಉಂಟೆಂಬ ಮಾತ ನ್ನಾದರೂ ತಪ್ಪದೆ ಹೇಳುತ್ತದೆ ಈ ವಿಷಯಕ್ಕೆ ಸಕಲಧರ್ಮಗಳ ಲ್ಲಿಯೂ ಏಕವಾಕ್ಯತೆಯಿದೆ. ಪ್ರತಿಯೊಂದು ಧರ್ಮವು ಒಂದಿಲ್ಲೊಂದು ಸಾಧನಪದ್ಧತಿಯನ್ನು ಹೇಳಿಕೊಟ್ಟು–ಅದರಿಂದ ಮಾನವನು ದಿವ್ಯ ಜ್ಞಾನಕ್ಕೆ ಮುಟ್ಟುವನೆಂದು ಹೇಳುತ್ತದೆ. ಹೀಗೆಂದ ಬಳಿಕ ನಮ್ಮ ನ್ನವಯೇಚ್ಛುವು ಬೇರೆ ಬೇರೆ ಧರ್ಮಗಳ ಭಿನ್ನ ಭಿನ್ನ ವಿಚಾರಗಳಲ್ಲಿ ತಲೆ ಕೆಡಿಸಿಕೊಳ್ಳುತ್ತ ಕೂಡುವದಕ್ಕಿಂತ, ಅವುಗಳಲ್ಲಿ ಯಾವದೇ ಒಂದು ಪದ್ಧತಿಯಿಂದ ದಿವ್ಯಜ್ಞಾನಕ್ಕೆ ಮುಟ್ಟಲು ಯತ್ನಿಸಿದರೆ, ಅನಂತರ ಏನಿದೆಯೋ ಅದೆಲ್ಲ ತಾನಾಗಿಯೇ ಹೊರಬೀಳುವದಲ್ಲಾ! 'ಒಬ್ಬರು ದೇವರಿದ್ದಾನೆಂದರೇಕೆ– ಇನ್ನೊಬ್ಬರು ಇಲ್ಲವೆಂದರೇಕೆ? ಒಬ್ಬರು ಜನ್ಮಾಂತರವನ್ನು ಒಪ್ಪಿಕೊಂಡರೇಕೆ– ಇನ್ನೊಬ್ಬರು ಆ ಮಾತನ್ನೇ ಎತ್ತಲಿಲ್ಲವೇಕೆ?' ಮುಂತಾದ ಸಕಲಪ್ರಶ್ನೆಗಳ ಸಮರ್ಪಕ ಉತ್ತರವು ನಮಗೆ ಅಂದು ತಾನಾಗಿಯೇ ಅಂಗೈಯ ಕನ್ನಡಿಯಾಗುವದಲ್ಲಾ. ಆದರೆ ಆ ದಿವ್ಯಜ್ಞಾನವೆಂಬುದೇ ಇದ್ದದ್ದು ದಿಟವೋ–ಸಟೆಯೋ ಇದೇ ಮೊದಲಿಗೆ ಒಪ್ಪಿಗೆಯಾಗುವದಿಲ್ಲವಾದ್ದರಿಂದ ಸತ್ಯಾನ್ವೇಷಿಗೆ ಪೇಚಾಟ ಬರುತ್ತದೆ. ಇದಕ್ಕೆ ಸ್ವಾಧ್ಯಾಯವೇ ಪರಮ ಉಪಾಯವು.

ಜ್ಞಾನಭಿಕ್ಷುವು, ಧ್ಯಾನಸಾಧನದ ಕಾಲದಲ್ಲಿ ದಿನದ ಇನ್ನುಳಿದ

ವೇಳೆಯಲ್ಲಿ ಸಾಧಕಜೀವಿಗಳ ಸಾದ್ಯಂತಜೀವನವೃತ್ತಾಂತವನ್ನು ವಿವರಿಸುವ ಪುಸ್ತಕಗಳನ್ನಲ್ಲದೆ, ಅಧ್ಯಾತ್ಮವಿದ್ಯೆಯ **ಬಹುಶಾಖೆಗಳ** ಮೇಲೆ ಬರೆದ, ಬಗೆಬಗೆಯ ಗ್ರಂಥಗಳನ್ನು ಓದಿ ಮನನ ಮಾಡುತ್ತಿದ್ದನು. ಆಗ ಆಸ್ತಿಕರ ಗ್ರಂಥಗಳನ್ನೂ ನಾಸ್ತಿಕರ ಗ್ರಂಥಗಳನ್ನೂ ಆದರದಿಂದಲೇ ಓದಿ ಪರಿಶೀಲಿಸುತ್ತಿದ್ದನು. ಒಮ್ಮೆ ಅಜ್ಞೇಯವಾದಿಗಳಾದ ಸ್ಪೆನ್ಸರರ 'ಅಜ್ಞೇಯ ವಿಚಾರಾಂಶ' ಎಂಬ ಪುಸ್ತಕವನ್ನು ಓದುತ್ತಿದ್ದ ಹಾಗೆ ಒಂದು ವಿಲಕ್ಷಣವಿಷಯವು ಸೂಚಿತವಾಯಿತು. ನಮ್ಮ ನಾಯಕನ ಜೀವನದಲ್ಲಿ–ಎಷ್ಟೇ ಪುಟ್ಟದಾದರೂ **ತನ್ನ ಸ್ವತಹದ್ದೆಂಬ ಆರಂಭದ ಅನುಭವವು ಇದೇ ಆಗಿದೆ.** ಸ್ಪೆನ್ಸರರಿಗೆ ತಮ್ಮ ಯಾವ ಯುಕ್ತಿಯು, ತಿರುಗಿ ಪೂರ್ವಪಕ್ಷದ ಮಡುವಿನಲ್ಲೇ ನುಗಿಸಿತೋ ಅದೇ ಮಾತು ನಮ್ಮ ನಾಯಕನಿಗೆ ಉತ್ತರಪಥವನ್ನು ತೋರಿಸಿತು. ಸ್ಪೆನ್ಸರರು ವಿಶ್ವದ ಉತ್ಪತ್ತಿಯ ಬಗ್ಗೆ ಹೂಡಿದ ಕೋಟಿಕ್ರಮವೇನೆಂದರೆ:—

"ವಿಶ್ವವು ಹೇಗೆ ಹುಟ್ಟಿತೆಂಬ ಪ್ರಶ್ನಕ್ಕೆ ಮೂರು ಉತ್ತರಗಳು ಹೊರಡಬಲ್ಲವು. ೧) ದೇವರು ಅದನ್ನು ಮಾಡಿದ್ದಾನೆ. ೨) ಸೂಕ್ಷ್ಮಸ್ವರೂಪದೊಳಗಿಂದ ರೂಪಿತವಾಯಿತು. ೩) ಅದು ಹುಟ್ಟೇ ಇಲ್ಲ; ಎಂದೆಂದಿಗೂ ಇತ್ತು. ಇದಕ್ಕಿಂತ ಹೆಚ್ಚಿನ ಉತ್ತರವೇ ಹೊರಡದು. ಈಗ ಈ ಮೂರನ್ನೂ ಪರೀಕ್ಷಿಸುವಾ. ದೇವರು ಅದನ್ನು ಸೃಷ್ಟಿಸಿರಬೇಕಾದರೆ, ಆದು ಒಂದಾನೊಂದು ಕಾಲದಲ್ಲಿ ಇದ್ದಿದ್ದಿಲ್ಲವೆಂಬದು ಸ್ಪಷ್ಟ ಆಕಾಶವೆಂಬದು ಇದ್ದಿರಲಿಲ್ಲವೆಂದು ಹೇಳಲಿಕ್ಕೆ ಬರುವದೇ? ಇಲ್ಲ. **ಆಕಾಶವೆಂದರೆ ವಿಶಾಲವಾದ ಪೊಳ್ಳು.** ಪೊಳ್ಳು ಇರಲಿಲ್ಲವೆಂದು ಹೇಳಿದರೆ ಪಿಂಡವಿತ್ತೆಂದು ಸಿದ್ಧವಾಗುವದು. ಹಾಗಾದರೆ ಇದ್ದಿದ್ದಿಲ್ಲವೆಂದು ಹೇಳಲಿಕ್ಕೇ ಸಾಧ್ಯವಿಲ್ಲದ್ದನ್ನು ಯಾರೋ ನಿರ್ಮಿಸಿದರೆಂಬದು ಶುದ್ಧ ತಪ್ಪು. ಇನ್ನು ಎರಡನೇ ಮಾತು – ಸೂಕ್ಷ್ಮ

ರೂಪದಲ್ಲಿದ್ದದ್ದು – ತನ್ಮಾತ್ರಸ್ವರೂಪದಲ್ಲಿದ್ದದ್ದು ವ್ಯಕ್ತರೂಪಕ್ಕೆ ಬಂತೆಂದು ಹೇಳಿದರೆ, ಆ 'ಸೂಕ್ಷ್ಮ'ವೆಂಬದಾದರೂ ಎಲ್ಲಿಂದ ಬಂತೆಂಬ ಪ್ರಶ್ನವು ಉಳಿದೇ ಉಳಿಯುವದು. ಮೂರನೇ ಉತ್ತರದಂತೆ ವಿಶ್ವವು ಎಂದೂ ಹುಟ್ಟೇ ಇಲ್ಲವೆಂದರೆ ಅದು ಬುದ್ಧಿಗೇ ಹಿಡಿಸದ ಮಾತು. ಇದ್ದಷ್ಟು ಒಮ್ಮೆ ಹುಟ್ಟಿರಲೇ ಬೇಕೆಂದು ಬುದ್ಧಿಯು ಹೇಳುತ್ತದೆ."

ಈ ಕೋಟಿಕ್ರಮದಲ್ಲಿ ನಮ್ಮ ನಾಯಕನಿಗೆ ಒಂದು ಅತ್ಯಂತ ಅಪರಿಚಿತ ರಾಜ್ಯದ ನಕ್ಷೆಯು ಕಲ್ಪನಾನೇತ್ರದ ಮುಂದೆ ಕಾಣಿಸಿತು. ಆದೇನೆಂದರೆ "**ಆಕಾಶ!**" "**ವಿಶಾಲವಾದ ಪೊಳ್ಳು!!**" "ವಿಶಾಲ ವೆಂದರೆ ಎಷ್ಟು ವಿಶಾಲ??? ದೂರ – ದೂರ – ದೂರ!! ಮಹಾ ದೂರ!!! ಪಾರ – ಪಾರ – ಪಾರ!! ಅಪರಂಪಾರ!!! ಅಪಾರ ಆರಪಾರ !! ಮುಗಿ ದಿಲ್ಲ–ನಿಂತಿಲ್ಲ! ತುದಿಯಿಲ್ಲ –ಮೊದಲಿಲ್ಲ!! ಮಿಂಚಿನ ಕುದುರೆಯೇರಿ ಅಸಂಖ್ಯವರ್ಷ ಹಾರಿದರೂ ಅಂತವಿಲ್ಲ – ಆದಿಯಿಲ್ಲ! ಕೋಟಿ ವರುಷ ಹಾರಿದರೂ ಇಲ್ಲ! ಪರಾರ್ಧ – ಪರಾರ್ಧ ಪರ್ಯಂತರವಾದರೂ ಇಲ್ಲ! ಇಲ್ಲ – ಇಲ್ಲ – ಇಲ್ಲ!!! ಓ! **ಅನಂತವೇ!** ಓ! ಅನಂತವೇ!! ನಿನ್ನ ಅಂತವನ್ನರಿಯುವದೆಂದರೆ–ನಿನ್ನ ಅನಂತವನ್ನು ಪ್ರತ್ಯಕ್ಷೀಕರಿಸಿಕೊಳ್ಳು ವದೇ ಹ್ಯಾಗೇನು??? "**ನಿನ್ನನ್ನು ಯಾರೂ ನಿರ್ಮಿಸಿಲ್ಲ**" ಅಹುದ ಹುದು! ನೀನು ಸ್ವಯಂಭೂ!! ನಿನ್ನ ಆಚೆಗೆಂಬುದೇ ಇಲ್ಲದ ನಿನ್ನನ್ನು ನಿನ್ನ ಬಿಟ್ಟಿನ್ನೆಲ್ಲಿ ನಿಂತು ನಿರ್ಮಿಸಬೇಕು??? ನಿನ್ನ ಬಿಟ್ಟು ಬೇರೆ ಸ್ಥಳ ವಿಲ್ಲ. ಅತ್ಯತಿಷ್ಠದ್ದಶಾಂಗುಲಂ!! ಎಲ್ಲಿಗೆ ಬಂದರೂ ನೀನು ಅದಕ್ಕಿಂತ ಮುಂದೇ ಇರುವಿಯಲ್ಲಾ!'! ಅಗಾಧ–ಅಗಾಧ! ಅನಂತ - ಅನಂತ! ವಿಸ್ಮಯೋ ಮೇಮಹಾನ್ ರಾಜನ್ ಪಶ್ಯಾಮಿಚ ಪುನಃ ಪುನಃ! "ಬುದ್ಧಿಗೇ ಒಪ್ಪದ ಮಾತು! ಅಹುದಹುದು! ಬುದ್ಧಿಗೆ ಒಪ್ಪದ ಮಾತು! ಕಣ್ಣೆತ್ತಿ ನೋಡದ ಮಾತು! ಮುಗಿಲು ಮುಗಿದಿಲ್ಲ! ಕಾಲ ಹುಟ್ಟಿಲ್ಲ. ಅನಂತಾ, ಅಚ್ಯುತಾ, ಶಾಶ್ವತಾ, ದೇವದೇವಾ,

ಮಹಾದೇವಾ !!! ಕಾಡು ಮನುಜನಿಗೆ ಲೇಖನವು ಅರಿಯದ ಮಾತಾಗಿರುವಂತೆ ಇದೂ ನಮ್ಮ ಪಾಲಿಗೆ ಒಪ್ಪದ ಮಾತು ! ಎಂದೆಂದೂ ಪರಿಚಿತವಲ್ಲದ್ದು ಒಪ್ಪದ ಮಾತಲ್ಲದೆ ಏನು ? ನಿನ್ನ ಪ್ರತ್ಯಕ್ಷ ಪರಿಚಯದಿಂದ ಪಾವನನಾದರೆ ಆಗ ಮಾತ್ರ ಬುದ್ಧಿಗೊಪ್ಪುತ್ತದಲ್ಲವೇ !"

ಈಗ ನಮ್ಮ ನಾಯಕನಿಗೆ "ಆಕಾಶಕ್ಕೂ, ದೇವರಿಗೂ ಒಭಿನ್ನತೆಯಿದೆ !!!" ಎಂದು ಸ್ಪಷ್ಟವಾಗಿ ಗೋಚರವಾಯಿತು. ಈಗ ಆಕಾಶದ ಕಡೆಗೆ ಕಣ್ಣೆತ್ತಿ ನೋಡಿದಾಗಲೆಲ್ಲ ಈತನ ಬಾಯಲ್ಲಿ "ಅನಂತಪರಬ್ರಹ್ಮಣೇನಮಃ !" ಎಂಬ ಉದ್ಗಾರವು ತರಂಗಿತವಾಗುತ್ತಿರುತ್ತದೆ. ಆಕಾಶಾಂತರ್ಗತವಾದ ಸಮಸ್ತ ಸೃಷ್ಟಿಯು ಆ ಅನಂತನದೇ ಅಂಗವಿಶೇಷವೆಂದೆನಿಸಹತ್ತಿತು. ಆದುದರಿಂದ ಕಾಳಿದಾಸನ ಪ್ರಸಿದ್ಧ ಶ್ಲೋಕವಾದ–"ವಾಗರ್ಥಾವಿವ ಸಂಪೃಕ್ತೌ" ಎಂಬುದರ ಕೊನೆಯ "ಪಾರ್ವತೀ ಪರಮೇಶ್ವರೌ" ಎಂಬುದಕ್ಕೆ ಬದಲಾಗಿ ತನ್ನ "ಭುವನೇಶ್ವರೀ ವಿಶ್ವೇಶ್ವರೌ" ಎಂಬುದನ್ನು ಸೇರಿಸಿಕೊಂಡು ಪಠಿಸಹತ್ತಿದನು.—

> ವಾಗರ್ಥಾವಿವ ಸಂಪೃಕ್ತೌ
> ವಾಗರ್ಥಪ್ರತಿಪತ್ತಯೇ ॥
> ಜಗತಃ ಪಿತರೌ ವಂದೇ
> **ಭುವನೇಶ್ವರೀ ವಿಶ್ವೇಶ್ವರೌ** ॥

"ವಾಕ್ಯವೂ ಅರ್ಥವೂ ಅಭಿನ್ನಸಂಬಂಧದಿಂದ ಕೂಡಿರುವಂತೆ ಬೆರೆತಿರುವ ಜಗತ್ಪಿತೃಗಳಾದ ದ್ಯಾವಾಪೃಥಿವಿಯರನ್ನು ವಾಗರ್ಥಸಿದ್ಧಿಗಾಗಿ ವಂದಿಸುವೆನು."

ಇಷ್ಟೊತ್ತಿಗೆ ಈತನಿಗೆ ಛಾಂದೋಗ್ಯ ಉಪನಿಷತ್ತಿನಲ್ಲಿ ಆಕಾಶವೇ ಬ್ರಹ್ಮವೆಂಬರ್ಥದ ಈ ಕೆಳಗಿನ ಮಂತ್ರಗಳು ಸಿಕ್ಕವು—

"ಬ್ರಹ್ಮಧ್ಯಾನಪರಾಯಣನಿಗೆ ಮೊದಲಿಗೆ ತನ್ನ ಹೊರಗಿನ ಆಕಾಶವೇ ಬ್ರಹ್ಮವೆಂದೆನಿಸುವದು. ಬಳಿಕ ತನ್ನ ಒಳಗಿನ ಘಟಾ

ಕಾಶವೇ ಬ್ರಹ್ಮವೆಂದೆನಿಸುವದು. ಕೊನೆಗೆ ಒಳಗಿನ– ಒಳಗಿನ ಹೃದಯ ಗುಹಾಂತರ್ಗತವಾದ ಹೃದಯಾಕಾಶ ಅಥವಾ ಚಿದಾಕಾಶವೇ ಬ್ರಹ್ಮ ವೆಂದು ಅನುಭವವಾಗುವದು."

ಇಷ್ಟಕ್ಕೂ ಮೇಲೆ ಉತ್ತರಮೀಮಾಂಸೆಯಲ್ಲಿ "ಆಕಾಶಸ್ತ ಲ್ಲಿಂಗಾತ್"– **ಆಕಾಶವು ಆತನ ಕುರುಹಾಗಿದೆ.** – ಎಂಬ ಬ್ರಹ್ಮ ಸೂತ್ರವು ದೃಷ್ಟಿಗೋಚರವಾದ ಮೇಲಂತೂ ನಮ್ಮ ನಾಯಕನಿಗೆ ತನ್ನ ಪ್ರಾಥಮಿಕ ಸ್ವಾನುಭವದ ಮೇಲೆ ಹೆಚ್ಚಿನ ವಿಶ್ವಾಸ ಹುಟ್ಟಿತು. ಈಗ ಈತನಿಗೆ ಇಪ್ಪತ್ತುನಾಲ್ಕು ವರುಷ. ಇದಿರಲಿ.

ನಾವು ಯಾವಾಗಲೂ ನೋಡುತ್ತಿರುವ ವಿಷಯಗಳೆಲ್ಲ ಸಾಂತವಾಗಿರುವದರಿಂದ ಅವೆಲ್ಲವುಗಳಿಗೆ ಹುಟ್ಟು ಸಾವುಗಳೂ, ಕಟ್ಟು ನಿಟ್ಟುಗಳೂ ಉಂಟು. ಆದ್ದರಿಂದ ಅವುಗಳಲ್ಲೇ ಬಳಕೆ ಹೊಂದಿದ ನಮ್ಮ ಬುದ್ಧಿಯು ಸಾಂತವಾಗಿಯೇ ಇರುವದು. ಅಂತೇ ನಾವು ಎಲ್ಲ ವಸ್ತುಗಳಿಗೂ ಕರ್ತೃಕಾರಣ ಸಂಬಂಧವೂ, ಪರಿಮಾಣ ಪ್ರಮೇಯ ಗಳ ನಿಬಂಧನವೂ ಇದ್ದೇ ತೀರಬೇಕೆಂಬ ನಿಯಮವೊಂದನ್ನು ಕಟ್ಟಿ ಕೊಂಡು ಬಿಟ್ಟಿದ್ದೇವೆ. ಸೃಷ್ಟಿಯನ್ನು ನೋಡಿ, ಅದಕ್ಕೊಬ್ಬ ಸ್ರಷ್ಟಾರ ನಿರಲೇ ಬೇಕೆಂದು ನಿಶ್ಚಯಿಸುವದು, ಬಹುತರ ಎಲ್ಲ ಆಸ್ತಿಕ ಸಂಪ್ರ ದಾಯಗಳ ಪದ್ಧತಿಯಲ್ಲವೇ? ಹಾಗಾದರೆ ಆ ಸ್ರಷ್ಟಾರನನ್ನು ಸೃಷ್ಟಿ ಸಿದವರು ಇನ್ನಾರು? ಎಂಬ ಪ್ರಶ್ನೆ ಬಂದೇ ತೀರಬೇಕು. ಹಾಗೇ ಈ ಪ್ರಶ್ನಜಾಲವು ಎಷ್ಟು ಬೆಳೆದರೂ ಕೊನೆಗೆ ನಿಶ್ಚಿತವಾದ ಉತ್ತರ ವನ್ನೇ ಕಾಣೆವು. ಇಲ್ಲೇ ಸಂದೇಹವಾದವೂ, ಅಜ್ಞೇಯವಾದವೂ ಅವತರಿಸುವವು. ಆದುದರಿಂದ ಈಗ ನಾವೇನು ಮಾಡಬೇಕೆಂದರೆ:– ಸಾಂತವಸ್ತುಗಳಿಗಿರಬೇಕಾದ ಲಕ್ಷಣಗಳಿಂದ ಅತ್ಯಂತಭಿನ್ನವಾದ ಬೇರೆ ಲಕ್ಷಣವುಳ್ಳ ವಸ್ತುವಿಶೇಷಗಳೇನಾದರೂ ಇವೆಯೇ ಹೇಗೆ? ಎಂದು ಹುಡುಕಿ ನೋಡಿದರೆ, **ಆಕಾಶವೂ, ಕಾಲವೂ ಇಂಥ ಅತಿ**

**ವಿಲಕ್ಷಣ ವಸ್ತುಗಳೆಂದು ಗೊತ್ತಾಗುವದು.** ಆ ಮೇಲೆ ನಮ್ಮ ಬುದ್ಧಿಗೆ ಅದುವರೆಗೆ ಗೊತ್ತೇ ಇಲ್ಲದ ಅನಾದಿತ್ವ, ಅನಂತತ್ವ, ಅಪ್ರಮೇಯತ್ವ ಮುಂತಾದ ಶಬ್ದಗಳ ಸ್ಪಷ್ಟವಾದ ಅರ್ಥ-ದರ್ಶನವಾಗುವದು ಆಗ ಬುದ್ಧಿಯ ನಾಸ್ತಿ – ನಾಸ್ತಿಯೆನ್ನುವ ಉಗ್ರತೆ ಹೋಗಿ, ಅಸ್ತಿಅಸ್ತಿಯೆನ್ನುವ ಹೊಸ ಬೆಳಕು ಪ್ರದೀಪ್ತವಾಗುತ್ತದೆ. ಆದ್ದರಿಂದ ಬುದ್ಧಿಯ ಬೆನ್ನು ಹತ್ತಿದವರು, ಅಜಾತ–ಅನಂತ– ಶಾಶ್ವತಗಳಾದ **ಮಹಾ ಆಕಾಶ** ಮತ್ತು **ಮಹಾಕಾಲ** ಇವೆರಡು ವಿಲಕ್ಷಣ–ಲಕ್ಷಣಗಳನ್ನು ಕುರಿತು ಧ್ಯಾನಿಸುವದು ಅಗತ್ಯ. ಅಂದರೆ ಅವರಿಗೆ ಅನುಭವಿಕ ಆಸ್ತಿಕತೆಯು ದಾರಿ ತೋರದಿರದು.

ನಮ್ಮ ನಾಯಕನಿಗೀಗ ಎಷ್ಟು ಉದ್ವಿಗ್ನತೆಯುಂಟಾಗುತ್ತಿದ್ದರೂ ಬೈಲಿಗೆ ಹೋಗಿ, ಆಕಾಶದ ಕಡೆಗೆ ಕಣ್ಣಿಟ್ಟು ನೋಡುತ್ತಿದ್ದ ಮಾತ್ರಕ್ಕೆ ಅದೆಲ್ಲವೂ ಬಯಲಾಗಿ ಹೋಗುವದು. ಆಕಾಶವೀಗ ಆತನ ಆತ್ಮದ ತವರುಮನೆಯಾದಂತಾಗಿದೆ. ಈ ಕಾಲದಿಂದ ಮುಂದೆ ಜ್ಞಾನಭಿಕ್ಷುವಿಗೆ ಸೃಷ್ಟಿಸೌಂದರ್ಯದಲ್ಲಿ ಅತಿಯಾಗಿ ಅಭಿರುಚಿ ಹುಟ್ಟಿತು. ಬೆಳಕುಬೆಂಕಿ, ನೀರುನೆಲ ಇವುಗಳನ್ನು ಮುಕ್ತ ಚಿತ್ತದಿಂದ ನೋಡಿದಾಗಲೆಲ್ಲ ಆತನು— " ಅಹಾ ! ನೀವು ನಿಜವಾಗಿ ಏನೋ ಇದ್ದೀರಿ !! " ಎಂದು ಅಂದುಕೊಳ್ಳುವನು. ಒಟ್ಟಿಗೆ ವಿಶ್ವದ ಕೆಲವೊಂದು ಮಹತ್ತರವಾದ ವಿಶೇಷಗಳು ಈತನಿಗೆ ' ಏನಿದ್ದಿದ್ದೀತು ' ಎಂಬುದರ ದರಿಯೊಳಗಿಂದ ' ಏನೋ **ಇದೆ** ' ಎಂಬ ನಸುಬೆಳಕಿಗೆ ತಂದವು. " ಯದ್ಯದ್ವಿಭೂತಿಮತ್ಸತ್ತ್ವಂ............................ ..... ಮಮತೇಜೋಂಶಸಂಭವಂ. "

ಆದರೆ ಇಷ್ಟಕ್ಕೇ ಎಲ್ಲಿ ನಿಲ್ಲುತ್ತದೆ? ಇಷ್ಟು ಇಷ್ಟು ದಿನಗಳವರೆಗಿನ **' ಇದೆ '** ಎಂಬ ಭಾವವು ಎಷ್ಟಾದರೂ ಪರ್ಯಾಯಮಾತ್ರದ್ದಾಗಿದ್ದರೆ, ಈಗಿನದು ಸ್ವಪ್ರತ್ಯಯದ್ದೆಂಬದು ಮಾತ್ರ ನಿರ್ವಿವಾದ

ವಾಗಿದೆ. ಈಗ ಅದರ ದೂರದ ನಾತ ಹತ್ತಿದ್ದುದೇನೋ ಸತ್ಯವೇ. ಆದರೂ ಸಮೀಪಕ್ಕೆ ಹೋಗುವವರೆಗೆ ಸಾಗುವದು ತಪ್ಪಿಲ್ಲವಲ್ಲ! ಸಾಧಕರೆಂಬವರಿಗೆ ಸಾಧ್ಯದ ಅಸ್ತಿತ್ವವು ನಿಶ್ಚಿತವೆಂದೆನಿಸಿದಷ್ಟೂ ಸಮೀಪಿಸುವ ಆಶೆ ಹಿಂದಾಗುತ್ತದೆ.

ಸಾಧಕರ ವಸತಿಸ್ಥಾನಗಳು ಎರಡು ಇವೆಯೆನ್ನಬಹುದು. ಒಂದು ಪಾರಮಾರ್ಥಿಕತೆ, ಇನ್ನೊಂದು ಯೋಗಾನುಭವ. ಸಾಧಕ ವರ್ಗದಲ್ಲಿ ಬಹುಜನರು, ಪಾರಮಾರ್ಥಿಕಸತ್ಯವು ಪ್ರಮಾಣಿತವಾದೊಡನೆಯೆ ಅಲ್ಲಿಗೆ ಸಂತೃಪ್ತರಾಗುವರು. ಇವರು ಮುಂದಿನ ತಮ್ಮ ಶೇಷಜೀವನವನ್ನು ಪರಮಾರ್ಥ-ಬುದ್ಧಿಯ ಪಡಿಯಚ್ಚಿನಲ್ಲಿ ಪಡಿಮೂಡಿಸುತ್ತ ಸಾಗುವರು. ಆದರೆ ಇನ್ನು ಕೆಲವು ಸಾಧಕರಿಗೆ ಅಲ್ಪಸಂತುಷ್ಟಿಯಿರದ್ದರಿಂದ, ಅವರು ಪಾರಮಾರ್ಥಿಕತೆಗೇ ನಿಲ್ಲದೆ ಇನ್ನೂ ಮುಂದುವರಿದು, **“ಕೇವಲ”**ವನ್ನು ಕಂಡುಂಡು ತಣಿಯ ಲೆಳಸುವರು. ಆದರೆ ಇದು ಈಗಿರುವ ಯಾವ ಒಳಹೊರ ಇಂದ್ರಿಯಗಳಿಂದಲೂ ಸಾಧ್ಯವಿಲ್ಲ. ಸುಪ್ತಮಾನಸಶಕ್ತಿಗಳ ಬಾಗಿಲು ತೆರೆಯಬೇಕಾಗುವದು. ಇದಕ್ಕೇ ಯೋಗಾನುಭವವೆಂಬ ಹೆಸರು. ಅರವಿಂದರು ಇವೆರಡರ ಸಂಯೋಗವೇ ನವಯುಗಕ್ಕೆ ಬೇಕಾಗಿರುವ ಸಿದ್ಧಿಯೆಂದು ಹೇಳುತ್ತಿದ್ದಾರೆ. ಬರೀ ಪಾರಮಾರ್ಥಿಕತೆ– ಸ್ಪಿರಿಚ್ಯುಯಾಲಿಟಿಯಿಂದಾಗಲಿ, ಬರೀ ಅಂತರ್ಮಾನಸದ ಅನುಭವ– ಸಾಯಕಿಕಲ್ ಎಕ್ಸ್‌ಪೀರಿಯನ್ಸ್‌ದಿಂದಾಗಲಿ ಸಂಪೂರ್ಣತೆಯುಂಟಾಗದ್ದರಿಂದ ಅವರು, ಸಾಯ್ಕೋಸ್ಪಿರಿಚ್ಯುಅಲಿಝೇಶನ್, ಅಥವಾ ಯೋಗಾನುಭವಯುಕ್ತ ಪಾರಮಾರ್ಥಿಕತೆಯೆಂಬುದರ ಅಗತ್ಯವನ್ನು ಸ್ಪಷ್ಟಗೊಳಿಸುತ್ತಿದ್ದಾರೆ.

ಪಾರಮಾರ್ಥಿಕ ಬುದ್ಧಿಯುಂಟಾದ ಬಳಿಕ, ಜಗತ್ತಿನ ದ್ವಂದ್ವಗಳನ್ನು ಅಸಿಮಿಸಿಗೊಳ್ಳದೆ ಧಾರಣ ಮಾಡುವ ಶಕ್ತಿಯು ಬಹಳ

ಹುಟ್ಟಿಗೆ ಬೆಳೆಯುವದೇನೋ ನಿಜ. ಆದರೂ ಅದಕ್ಕೆ ಒಂದು ಮೇರೆ ಇರುತ್ತದೆ. ಆ ಮೇರೆಗೆ ಧಕ್ಕೆ ಹತ್ತುವಷ್ಟು ದ್ವಂದ್ವಗಳ ಹಾವಳಿಯುಂಟಾದರೆ, ಆಗ ಆ ಪಾರಮಾರ್ಥಿಕತೆ ತಡೆದು ನಿಲ್ಲಲಾರದು. ಇನ್ನು ಅಂತರ್ಮಾನಸವ್ಯಾಯಾಮವು ಅಥವಾ ಸಾಯಿಕ್ಕಿಕ್ ಕಲ್ಚರ್ ಎಂಬುದು ಬೆಳೆದ ಹಾಗೆ ಅದರ ಅದ್ಭುತಶಕ್ತಿಗಳು ಪ್ರಕಟವಾಗುವವಾದರೂ ಅಲ್ಲಿ ಅಪಾಯಗಳಿಗೂ ಕೊರತೆಯಿಲ್ಲ. ಆದುದರಿಂದ ಪಾರಮಾರ್ಥಿಕತೆಯೂ, ಯೋಗಾನುಭವವೂ ಎಲ್ಲಿ ಸಮ್ಮಿಲಿತವಾಗಿ ಸಾಗುವವೋ ಆ ಬಿಂದುವಿನಲ್ಲಿ ನಮ್ಮ ಗುರಿಯಿರಬೇಕೆಂದು ಅರವಿಂದರ ಅಭಿಪ್ರಾಯವಿದೆ.

ಈಗ ನಮ್ಮ ನಾಯಕನಿಗೆ ಕವಿಪ್ರವರರಾದ 'ಎ. ಈ.' ಅವರ 'ದರ್ಶನದೀಪಿಕೆ' ಅಥವಾ 'ಕ್ಯಾಂಡಲ್ ಆಫ್ ವಿಜನ್' ಎಂಬ ಪುಸ್ತಕವನ್ನೋದುವದರಿಂದ ಅಂತರ್ಮಾನಸಸಾಮ್ರಾಜ್ಯದ ಅಸ್ತಿತ್ವವು ಬುದ್ಧಿಗ್ರಾಹ್ಯವಾಯಿತು. ಪರಮಾರ್ಥಪೂರ್ಣರಾದ ಮಾರಿಸ್ ಮೆಟರ್‌ಲಿಂಕರ ವಿಚಾರಗಳು ಈತನ ಪಾರಮಾರ್ಥಿಕಶ್ರದ್ಧೆಗೆ ಹೆಚ್ಚಿನ ಕಳೆಯನ್ನಿತ್ತವು. ಅಂದರೇನು? ನಮ್ಮ ನಾಯಕನಿಗೆ ಈ ಕಾಲದಲ್ಲಿ ಶ್ರದ್ಧೆಯು ಸಂಪೂರ್ಣ ಅಸಂದಿಗ್ಧವಾಗಿದ್ದಿತೆಂಬ ಅರ್ಥವಲ್ಲ; ಆದರೆ ಈ ವರೆಗೆ ಬುದ್ಧಿಗೆ ಸತ್ಯವೆಂದೆನಿಸುವದಕ್ಕೇ ಮಾರ್ಗವಿಲ್ಲದ ಮಾತುಗಳನ್ನೆಲ್ಲಾ ಸತ್ಯವಾಗಿರಬಹುದೆಂದು ಗ್ರಹಿಸುವದೊಂದು ಕಲೆಯು ಮಾತ್ರ ಈಗ ಆತನಿಗೆ ಹೊಳೆದಿದ್ದು ನಿಜ. ಅಹುದೋ ಬಹುದೋ ಎಂಬ ಕಗ್ಗತ್ತಲೆಯಿಂದ ಪಾರಾಗಿ ಈಗ, '**ಬಹುದು**' ಎಂತಾದರೂ ನಿರ್ಧರಿಸಿಕೊಳ್ಳುವ ನಸುಬೆಳಕಿಗೆ ಬಂದು ಮುಟ್ಟಿರುವನೆಂದು ಹೇಳಬಹುದು. 'ಅನಂತ ಪರಬ್ರಹ್ಮಣೇನಮಃ' – 'ಭುವನೇಶ್ವರೀ ವಿಶ್ವೇಶ್ವರೌ' ಎಂಬ ಸ್ವಮಂತ್ರಗಳ ಅವಿರತ ಆವರ್ತನೆಯೇನೋ ನಡೆದೇ ಇದೆಯಾದರೂ ಒಳಗೊಳಗೆ ಹೊಸ ಅತೃಪ್ತಿಯು ಹೊತ್ತುತ್ತಲೇ ಇದೆ. "ಓ ಅಗಾ

ಧವೇ, ಓ ಅನಂತವೇ, ಏನು ಎಂಬುದು ಅರಿದಾದರೂ, **‘ಏನೋ’** ಎಂದಾರೆ ತುಂಬಾ ದಿಟವು! ಏನೋ ಇರಲೊಲ್ಲೆಯೇಕೆ, ಆದರೆ **ಇದ್ದೀ!!** ಇದು ಮಾತ್ರ ಸಂಪೂರ್ಣ ಸತ್ಯವಾಗಿದೆ. ನನ್ನ ಕಣ್ಣು ಕಟ್ಟಿದ ಕಗ್ಗತ್ತಲೆಯನ್ನು ನಿವಾರಿಸು. ಬೆಳಕಿಗೆ ಹಸಿದು ಬಾಯಿ ಬಿಡುವೆ. ತಮಸೋ ಮಾ ಜ್ಯೋತಿರ್ಗಮಯ!’



# ೧೨. ಜೀವನಸಾಮರಸ್ಯ.

ನಮ್ಮ ನಾಯಕನಲ್ಲಿ ವ್ಯಾಕುಲತೆಯಿಂದುಂಟಾಗುವ ಚಿತ್ತ ವಿಕ್ಷೇಪವು ಬೇರೂರಿಕೊಂಡು ಕುಳಿತದ್ದು, ಮೊದಲಿನಿಂದಲೂ ತಿಳಿದ ಮಾತಾಗಿದೆಯಷ್ಟೇ. ಸ್ವತಃ ಆತನಿಗೂ ಗೊತ್ತಾಗಿಯೇ ಇದೆ. ಆದರೆ ಇದನ್ನು ನಿವಾರಿಸಿಕೊಳ್ಳುವದಕ್ಕೆ ಮಾತ್ರ ಆತನಿಗೆ ಆಗದೆ ಹೋಗ ಹತ್ತಿತು. ಇದು ಬಯಲಾದ ಹೊರತು, ಅಂತರ್ಮಾನಸವು ಅರಳಲಾರ ದೆಂಬದೂ ಗೊತ್ತಿದ್ದ ವಿಷಯವೇ. ಆದರೂ ಉಪಾಯವೇನು? ರಜಃ ಪ್ರಕೃತಿಯು ಬದಲಾದ ಹೊರತು, ದುಃಖವೂ ವ್ಯಾಕುಲತೆಯೂ ತಪ್ಪ ಲಾರವು. 'ರಜಸಸ್ತು ಫಲಂ ದುಃಖಂ'—ಹಡಬಡಿಸುವ ರಾಜಸವೃತ್ತಿ ಯನ್ನು ಆವರಿಸಿ, ಧೀರ ಸಾತ್ವಿಕತೆಯು ಮೈದೋರಿದಲ್ಲದೆ ಜ್ಞಾನವು ಪ್ರದೀಪ್ತವಾಗಲಾರದು. 'ಸತ್ತ್ವಾತ್ ಸಂಜಾಯತೇ ಜ್ಞಾನಂ.'

ಮನಸ್ಸಿನ ಮೇಲೆ ಪ್ರಭುತ್ವವಿಲ್ಲದ ವ್ಯಾಕುಲಸಾಧಕರ ಜೀವನ ದಲ್ಲಿ ಪ್ರಖರ ಅನುತಾಪದಿಂದಲ್ಲದೆ, ಬೇರೆ ಇನ್ನಾವದರಿಂದಲೂ ಸ್ವಭಾವ ಪರಿವರ್ತನವಾಗುವದಿಲ್ಲ. ಅಗಸ್ಟೀನನೆಂಬ ಪುರಾತನ ಭಕ್ತಸಾಧಕನ ಆತ್ಮಚರಿತ್ರದಲ್ಲಿ, ಆತನು ತನ್ನ ಆಧ್ಯಾತ್ಮಿಕಪ್ರಗತಿಗೆ ಪ್ರತಿಬಂಧಕ ವಾಗಿದ್ದ ಕಾಮುಕತೆಯ ವಿಷಯದಲ್ಲಿ ಎಷ್ಟು ಪ್ರಯತ್ನಿಸಿಯೂ, ಪ್ರಾರ್ಥಿಸಿಯೂ ಫಲವಿಲ್ಲದೆ ಹೋಗಲು, ಪೂರ್ಣ ನಿರಾಶನಾಗಿ ಮಗುವಿ ನಂತೆ ಹೊರಳಾಡಿ ಅತ್ತ ಹಾಗೆ ಬರೆದಿದ್ದಾನೆ! ಅಂದೇ ಅನಿರ್ವಚನೀಯ ವಾದ ಆಂತರಿಕಶಕ್ತಿಯು ಆತನಲ್ಲಿ ಪ್ರಕಟವಾಯಿತಂತೆ. ಅರವಿಂದರ ಕಾರಾಜೀವನ ವೃತ್ತಾಂತದಲ್ಲೂ ಈ ಮಾತಿಗೆ ಸಾಕ್ಷಿಯಿದೆ. ಅವರಿಗೆ ಅಲ್ಲಿಯ ಏಕಾಂತವಾಸವು ಅಸಹನೀಯವಾಗಿ, ಚಿತ್ತವನ್ನೇ ನಿಗ್ರಹಿಸಿ ಕೊಳ್ಳಲಿಕ್ಕಾಗದಿರಲು ಕಾತರಿಸಿ, ಕಳವಳಿಸಿ ದೇವದೇವನಲ್ಲಿ ಅತ್ಯಂತ

ವಾಗಿ ಮೊರೆಯಿಟ್ಟು 'ಗೋಳಾಡಿ' ಪ್ರಲಾಪಿಸುತ್ತಿರುವಾಗಲೇ ಅಸೀಮವಾದ ಶಾಂತಿಯು ಅವತರಿಸಿತಂತೆ. ಅಂದಿನ ಆಶಾಂತಿಯು, ತಮ್ಮ ಜೀವನದಲ್ಲಿ ಎಂದೆಂದಿಗೂ ಅಳುಕಲಿಲ್ಲವೆಂದು ಅವರು ಬರೆದಿಪ್ಪಾರೆ. ಅಂತೇ ಅವರು, **ಅಶಕ್ಯವು ಶಕ್ಯದ ಆರಂಭ**ವೆಂದು ಹೇಳಿದ್ದಾರೆ.

ಈಗ ನಮ್ಮ ನಾಯಕನು ತನ್ನ ವ್ಯಾಕುಲತೆಯನ್ನು ಕೆರಳಿಸುವ ವಿಷಯಗಳು ಯಾವವೆಂಬುದರ ಎಣಿಕೆಹಾಕಿದನು — "ದೇವನು ಕರುಣಾಕರನಾಗಿರುವುದಾದರೆ, ನನ್ನ ಮೊರೆಯು ಕೇಳಿಸಬಾರದೇಕೆ?" ಎಂದು ತನ್ನ ಜೀವನವು ಒಮ್ಮೆಲೇ ಉಚ್ಛೃಂಖಲವಾಗುತ್ತಿರುವದನ್ನು ಅವನು ಕಂಡು ಹಿಡಿದನಲ್ಲದೆ, ಲೋಕದೊಳಗೆ ಸದಾ ನಡೆಯುತ್ತಿರುವ ಘನಘೋರವಾದ ಜೀವನ ಕಲಹಗಲ್ಲಿ ತನ್ನ ಚಿತ್ತವು ಉದ್ಭ್ರಾಂತವಾಗಿ ನೆಲೆಯಿಲ್ಲದೆ ಆತಲದಲ್ಲಿ ಮುಳುಮುಳುಗಿ, ಗುಟಕರಿಸುತ್ತ - "ಜಗತ್ತಿನ ಪ್ರಭುವು ಕಣ್ಣುಮುಚ್ಚಿರುವನೋ?" ಎಂದು ತಳಮಳಿಸುತ್ತಿರುವದನ್ನೂ ಅರಿತುಕೊಂಡನು. ಇನ್ನು ಇದಕ್ಕೊಂದು ವಿರುದ್ಧತಂತ್ರವನ್ನು ಯೋಚಿಸಬೇಕಲ್ಲವೇ? 'ವಿತರ್ಕ ಬಾಧನೇ ಪ್ರತಿಪಕ್ಷಭಾವನಂ !!'

ಅರವಿಂದರ ಗ್ರಂಥದಲ್ಲಿ — "**ಜಗತ್ತಿನ ಆಗುಹೋಗುಗಳ ಸ್ಥಾನ – ಕಾಲ – ನಿಮಿತ್ತಗಳೆಲ್ಲ ಕಲ್ಪಾರಂಭದಲ್ಲೇ ನಿಶ್ಚಿತವಾಗಿ ಬಿಟ್ಟಿವೆ. ಅವುಗಳ ಸಲುವಾಗಿ ವ್ಯಾಕುಲನಾಗಬೇಡ.**" ಎಂದು ಹೇಳಿದ ವಾಕ್ಯವನ್ನು ನಂಬುವದಕ್ಕಾದರೆ, ವ್ಯಾಕುಲತೆಯೆಂಬುದು ಹೇಳಹೆಸರಿಲ್ಲದೆ ಓಡಿ ಹೋಗಲಿಕ್ಕೆ ಸಾಧ್ಯವಿದೆ. ಆದರೆ ಹಾಗೆ ನಂಬುವದಕ್ಕೆ ಉಪಾಯವೇನು? ಈಗ ಜ್ಞಾನಭಿಕ್ಷುವು ಎರಡು ಉಪಾಯಗಳನ್ನು ಶೋಧಿಸಿ ತೆಗೆದನು. ೧. – ಜ್ಯೋತಿಷಶಾಸ್ತ್ರದ ಸತ್ಯತೆಯು ಮನವರಿಕೆಯಾದರೆ, ಜಗತ್ತಿನ ಸರ್ವಘಟನೆಗಳ ಹ್ರಾಸ–ವೃದ್ಧಿಗಳ

ಸ್ಥಾನ ಕಾಲ ನಿಮಿತ್ತಗಳು, ನಿಶ್ಚಿತವಾಗಿಯೇ ಇವೆಯೆಂದು, ಸುಲಭವಾಗಿ ನಂಬಬಹುದು. ೨-ಇದರ ಜೊತೆಗೇ ಮಾಡಬೇಕಾದ ಇನ್ನೊಂದು ಕೆಲಸವೇನೆಂದರೆ-ಪ್ರಯೋಗದ ಸಲುವಾಗಿ ಒಂದೆರಡೇ ವ್ಯಕ್ತಿಗಳನ್ನಾರಿಸಿಕೊಂಡು, ಅವರೊಡನೆ ಅತ್ಯಂತ ಐಕ್ಯದಿಂದಿರಲಿಕ್ಕೆ ಯತ್ನಿಸಬೇಕು. ಇದರಿಂದ ಐಕ್ಯಪಥದ ವಿಘ್ನಗಳೇನೆಂಬದೂ, ಹೇಗೆ ಅವುಗಳ ನಿವಾರಣವಾಗುವದೆಂಬದೂ ಗೊತ್ತಾಗುವದರಿಂದ ಮುಂದೆ ಐಕ್ಯಸಾಧನದ ಪರಿಘವನ್ನು ವಿಸ್ತರಿಸಿಕೊಳ್ಳಲಿಕ್ಕೆ ಸಾಧ್ಯವಾಗುವದು.

ಸಮಚಿತ್ತತ್ವವು ವ್ಯಾಕುಲತೆಗೆ ಮದ್ದಾಗಿದೆಯೆಂದರಿತ ಮೇಲೆ ಅದರ ಸಾಧನವು ಕೂಡಲೇ ಆರಂಭವಾಯಿತು.

ಜ್ಯೋತಿಷ್ಯಶಾಸ್ತ್ರವನ್ನು ಬಹಳವಾಗಿ ಪರಿಶೀಲಿಸಿದ ಮೇಲೆ ಕೊನೆಗೆ ಆತನಿಗೆ ಹೊಳೆದದ್ದೇನೆಂದರೆ- "ದೀರ್ಘಪರಿಶ್ರಮದ ಅನಂತರ ಎಲ್ಲ ಶಾಸ್ತ್ರಗಳಂತೆ ಇದು ಕೂಡ ಸತ್ಯವಾಗಿರಲೇಬೇಕೆಂದು ನಂಬಲಿಕ್ಕೆ ಯೋಗ್ಯವಾದ, ಎಷ್ಟೋ ವಿಲಕ್ಷಣವಾದ ತಾಳಮೇಳಗಳು ಕಂಡುಬರುವದು ನಿಶ್ಚಯ; ಆದರೆ ಈ ಶಾಸ್ತ್ರದ ಎಷ್ಟೋ ಭಾಗವು ಇನ್ನೂ ಸಂಶೋಧಿಸಲ್ಪಡಬೇಕಾಗಿದ್ದರೂ ಇದ್ದಷ್ಟರಲ್ಲೇ ಇದರ ಸತ್ಯತೆಯನ್ನು ಕಂಡುಕೊಳ್ಳುವದಕ್ಕೆ ಸಾಕಾಗುವಷ್ಟು ಪ್ರಮಾಣಗಳು ಸಿಕ್ಕದೆ ಹೋಗುವದಿಲ್ಲ. ಆದರೂ ಅಸಂಶೋಧಿತ ಅಂಶಗಳು ಒಮ್ಮೊಮ್ಮೆ ಇಡಿಯೆಲ್ಲದರ ಬಗ್ಗೆಯೇ ಸಂಶಯಪಡುವಂತೆ ಮಾಡಿ ಬಿಡುವವು."

ಹಿಂದೆ ಹೇಳಿದ ಮಹಾಮೇಧಾವಿಯಾದ ಅಗಸ್ಟೀನನೆಂಬ ಸಾಧುವು ಕೂಡ, ಈ ಜ್ಯೋತಿಷವಿದ್ಯವನ್ನು ಅತಿಶಯವಾಗಿ ವ್ಯಾಸಂಗಮಾಡಿಯೂ ಕೂಡ, ಕೊನೆಗೆ ಅದನ್ನು ತಾನು ನಂಬದೆ ಹೋದುದಾಗಿ ತನ್ನ 'ಬಿನ್ನಪ' ಎಂಬ ಆತ್ಮಚರಿತ್ರದಲ್ಲಿ ಹೀಗೆ ಹೇಳಿದ್ದಾನೆ.

" ನನ್ನ ಜೀವದ ಮಿತ್ರನೊಬ್ಬನು ತನ್ನ ತಂದೆಯ ವಿಷಯದಲ್ಲಿ ಕೆಲವು ಸಂಗತಿಗಳನ್ನು ತಿಳಿಸಿದನು. ಅದೆಂತೆಂದರೆ:– ಆತನ ತಂದೆಯು ಜ್ಯೋತಿಷವಿದ್ಯೆಯ ಸರ್ವಗ್ರಂಥಗಳನ್ನೂ, ತನ್ನೊಬ್ಬ ಸ್ನೇಹಿತ ನೊಂದಿಗೆ ಕೂಡಿಕೊಂಡು ಚೆನ್ನಾಗಿ ಪರಿಶೀಲಿಸುತ್ತಿದ್ದನು. ಇವರಿಬ್ಬ ರಿಗೂ ಈ ವಿದ್ಯೆಯಲ್ಲಿ ಎಷ್ಟು ಆಸಕ್ತಿಯಿತ್ತೆಂದರೆ, ಇವರು ತಮ್ಮ ತಮ್ಮ ಮನೆಯೊಳಗಿರುವ ಬೆಕ್ಕು ನಾಯಿ ಮುಂತಾದ ಪ್ರಾಣಿಗಳು ಹೆರುವ ನಿಮಿಷಗಳನ್ನೂ ಬಹು ಜಾಗರೂಕತೆಯಿಂದ ಬರೆದಿಟ್ಟು, ಅವವುಗಳ ಜಾತಕಗಳನ್ನು ಸಿದ್ಧಪಡಿಸುವರು. ಈ ಪ್ರಕಾರ ಬಹು ಕಾಲ ನಡೆಯುತ್ತಿರುವಲ್ಲಿ, ನನ್ನ ಈ ಸ್ನೇಹಿತನ ತಾಯಿಯು ಈತ ನನ್ನು ಪ್ರಸವಿಸುವದಕ್ಕಿರುವ ಕಾಲದಲ್ಲಿ ಇವನ ತಂದೆಯ ಆ ಸಹಾ ಧ್ಯಾಯಿಯ ಮನೆಯಲ್ಲಿಯೂ ಒಬ್ಬ ದಾಸಿಯು ಗರ್ಭವತಿಯಾಗಿದ್ದು ಹೆರುವದಕ್ಕಿದ್ದಳು. ಈ ಇಬ್ಬರೂ ಸ್ತ್ರೀಯರೂ ಯಾವ ಯಾವ ಸಮಯ ದಲ್ಲಿ ಹಡೆಯುವರೋ ಎಂದು, ಆ ತಂದೆಯೂ ಆತನ ಗೆಳೆಯನೂ ಬಹಳ ಸೂಕ್ಷ್ಮವಾಗಿ ದಿನಗಳನ್ನೂ, ಗಂಟೆಗಳನ್ನೂ, ನಿಮಿಷಗಳನ್ನೂ ಲೆಕ್ಕಮಾಡುತ್ತಲೇ ಇದ್ದರು. ಹೀಗಿರಲು, ದೈವವಶದಿಂದ ಆ ಇಬ್ಬರು ಹೆಂಗಸರೂ ಕ್ಷಣಮಾತ್ರವೂ ಹೆಚ್ಚು ಕಡಿಮೆ ಇಲ್ಲದೆ, ಒಂದೇ ಸಮಯದಲ್ಲಿ ಮಕ್ಕಳನ್ನು ಹೆತ್ತರು. ಅದುಕಾರಣ ನನ್ನ ಈ ಮಿತ್ರನ ತಂದೆಯು, ತನ್ನ ಮಗನಿಗೆ ಯಾವ ಜಾತಕವನ್ನು ಬರೆಯಬೇಕಾ ಯಿತೋ, ಅದೇ ಜಾತಕವನ್ನು ಆತನ ಸ್ನೇಹಿತನು ತನ್ನ ದಾಸಿಯ ಮಗನಿಗೂ ಬರೆಯಬೇಕಾಯಿತು. ಹೀಗಿದ್ದರೂ ಕೂಡ ಘನವಂತರ ಮಗನು ಘನವಂತನೇ ಆದನು; ದಾಸಿಯ ಮಗನು ತೊತ್ತುಗೆಲಸ ದಲ್ಲೇ ಉಳಿದನು.– ಹೀಗೆ ನನ್ನ ಪ್ರಿಯಮಿತ್ರನ ಮನೆಯಲ್ಲೇ ನಡೆದ ಮಾತನ್ನು, ಆತನ ಬಾಯಿಂದಲೇ ಕೇಳಿದಾಗ, ಅದುವೊದಲು ನನ್ನಲ್ಲಿ ಉಳಿದಿದ್ದ ಅಲ್ಪ ಸ್ವಲ್ಪ ನಂಬಿಗೆಯು ಕೂಡ ನಿರ್ನಾಮವಾಯಿತು."

ಸತ್ಯಾನ್ವೇಷಿಗೆ ತಾನು ಸಂಶೋಧಿಸಹೊರಟ ಶಾಸ್ತ್ರದಲ್ಲಿ ಈ ಬಗೆಯ ವಿಲಕ್ಷಣಸಂದೇಹಕ್ಕೆಡೆಗೊಡುವ ಸಂಗತಿಗಳು ಹೇರಳವಾಗಿ ಸಿಕ್ಕುವದು ಸಹಜ. ಆದರೆ – ಈಗ ಜ್ಯೋತಿಷ ಶಾಸ್ತ್ರದಲ್ಲಿ ಬಹಳ ಮಾತುಗಳು ಇನ್ನೂ ನಿರ್ಣಯಕ್ಕೇ ಬಂದಿಲ್ಲ. ಈ ವಿದ್ಯೆಗೆ ಕೈ ಹಚ್ಚುವದಕ್ಕೆ ಯೋಗದೃಷ್ಟಿಯುವರು ಬರುವವರೆಗೂ ಈ ನಿರ್ಣಯಗಳು ಅತಂತ್ರವಾಗಿಯೇ ಉಳಿಯುತಕ್ಕವುಗಳೆಂಬದೂ ನಿಜವೇ. ಆದರೂ ಈಗ ಮಾತಿಗಾಗಿ ಅವುಗಳ ನಿರ್ಣಯವಾಗಿದೆಯೆಂದು ಇಟ್ಟುಕೊಳ್ಳೋಣ. ಹಾಗಾದರೆ – ಜಾತಕಶಾಸ್ತ್ರದಲ್ಲಿ ಅತ್ಯಂತ ಪ್ರಾಮುಖ್ಯವನ್ನು ಪಡೆದ 'ಜನ್ಮಲಗ್ನ' ಅಥವಾ 'ಪೂರ್ವಕ್ಷಿತಿಜ್ಯ' ವೆಂಬುದು ಎವೆಬಡಿಯಲು ಬೇಕಾಗುವದಕ್ಕಿಂತ ಕಡಿಮೆ ವೇಳೆಯೊಳಗಾಗಿ ಕೂಡ ಬುದ್ಧಿಗೆ ಭ್ರಮೆಹಿಡಿಯುವಷ್ಟು ವಿಲಕ್ಷಣವಾದ ವ್ಯತ್ಯಾಸವನ್ನು ಹೊಂದುತ್ತಿರುವ ವಿಷಯವು ನಮಗೆ ಅವಗತವಾದರೆ, ಆಗ ಈ ನಮ್ಮ ಒಗಟು ಒಡೆಯದಿರದು. ಒಂದು ವಿಕಲೆಯ ವ್ಯತ್ಯಾಸವುಂಟಾಗುವದಕ್ಕೆ ಸೆಕಂದಿನ ೧೫ನೆಯ ಭಾಗದಷ್ಟು ಕಾಲಾಂತರವು ಮಾತ್ರ ಸಾಕಾಗಿದೆಯೆಂದಮೇಲೆ– ಒಂದು ಕೂಸು ಮೇಷರಾಶಿಯ ಕೊನೆಯ ವಿಕಲೆಯಲ್ಲಿ ಜನ್ಮಲಗ್ನವಿರುವಾಗ ಹುಟ್ಟಿತೆಂದರೆ, ಅದೇ ಸ್ಥಳದಲ್ಲಿ ಸೆಕಂದಿನ ೧೫ನೆಯ ಭಾಗದಷ್ಟೇ ವೇಳೆಯ ಅಂತರದಲ್ಲಿ ಹುಟ್ಟುವ ಇನ್ನೊಂದು ಶಿಶುವಿನ ಜನ್ಮಲಗ್ನವು ಮುಂದಿನ ರಾಶಿಯಾದ ವೃಷಭದ ಮೊದಲನೆಯ ವಿಕಲೆಯಲ್ಲಿ ಬರುತ್ತದೆ. ಆದ್ದರಿಂದ ಮೊದಲನೆಯ ಹುಡುಗನಿಗೆ ಮೇಷಲಗ್ನದ ಫಲವು ಸಿಕ್ಕರೆ, ಮತ್ತೊಂದು ಶಿಶುವಿಗೆ ವೃಷಭದ ಫಲವುಂಟಾಗಬೇಕಾದದ್ದು ಸುಸಂಗತವಲ್ಲವೇ ? ಇದಲ್ಲದೆ ಇನ್ನೊಂದು ವಿಚಿತ್ರವೇನೆಂದರೆ, ಭೂಗೋಲದ ಎಲ್ಲ ಸ್ಥಾನಗಳಲ್ಲಿ– ಅಂದರೆ ಎಲ್ಲ ಅಕ್ಷಾಂಶ – ರೇಖಾಂಶಗಳಲ್ಲಿ ಏಕಕಾಲಕ್ಕೆ ಏಕಲಗ್ನವಿರಲಾರದು. ಸುಮಾರು ಅರವತ್ತೆಂಟು ಮೈಲಿಗೆ ಒಂದಂಶದಷ್ಟು

ಅಂತರವುಂಟಾಗುತ್ತಿರುವದರಿಂದ ಒಂದೇ ವಿಕಲೆಯಷ್ಟು ವ್ಯತ್ಯಾಸವಾಗಲಿಕ್ಕೆ ಮೂವತ್ತೆರಡು ಗಜದ ಸ್ಥಾನಾಂತರವು ಸಾಕು. ಅಹ! ಮೂವತ್ತೆರಡೇ ಗಜಗಳು ಸಾಕು! ಒಂದೇ ಮನೆಯಲ್ಲಿ ಒಂದು ಕೋಣೆಯಲ್ಲಿ ಹುಟ್ಟಿದ ಒಂದು ಮಗುವಿನ ಜನ್ಮಲಗ್ನವು ಮೇಷದ ಕೊನೆಯ ವಿಕಲೆಯಲ್ಲಿದ್ದರೆ ಅದೇ ಮನೆಯಲ್ಲಿ ಮೂವತ್ತೆರಡೇ ಗಜದ ಅಂತರದ ಮೇಲಿರುವ ಬೇರೊಂದು ಕೋಣೆಯಲ್ಲಿ ಅದೇ ಕ್ಷಣದಲ್ಲಿ ಹುಟ್ಟಿದ ಶಿಶುವಿನ ಜನ್ಮಲಗ್ನವು ಮುಂದಿನ ರಾಶಿಯಾದ ವೃಷಭದ ಮೊದಲನೆಯ ವಿಕಲೆಯಲ್ಲಿ ಬರುತ್ತದೆ. ಆದ್ದರಿಂದ ಈ ಹುಡುಗನಿಗೆ ವೃಷಭದ ಫಲವು ಸಿಕ್ಕರೆ, ಆ ಹುಡುಗನಿಗೆ ಮೇಷದ ಫಲವು ಸಿಗಬೇಕಾದದ್ದು ಸಯುಕ್ತಿಕವಾಗಿಲ್ಲವೇ?

ಇನ್ನೂ ಇಂಥ ಸೂಕ್ಷ್ಮವಿಷಯಗಳು ಎಷ್ಟೋ ಇವೆ. ಆದರೆ ಮಾದರಿಗೆಂದು ನಾನಿಲ್ಲಿ ಸ್ವಲ್ಪ ಮಾತ್ರವೇ ಸೂಚಿಸಿದೆ. ಅಂತೂ ನಮ್ಮ ನಾಯಕನಿಗೆ ಆ ಕಾಲದಲ್ಲಿ ಇಷ್ಟೊಂದು ಸೂಕ್ಷ್ಮವಿಷಯಗಳ ನೆಲೆ ಹತ್ತಿರಲಿಲ್ಲವಾದರೂ ಈ ಶಾಸ್ತ್ರವನ್ನು ಮಿಥ್ಯವೆಂದು ಹೇಳಲಿಕ್ಕೆ ಬಾಯಿಯಿಲ್ಲವೆನ್ನುವಷ್ಟು ಈತನ ಅಭ್ಯಾಸವಾಯಿತು.

ಇತ್ತಲಿನ್ನು ಐಕ್ಯಸಾಧನದ ಆಂದೋಲನವು ಎಲ್ಲಿಗೆ ಬಂತೆಂಬದನ್ನು ನೋಡುವಾ. ಈತನು, ಈತನ ಸತಿ, ಈತನ ಒಬ್ಬ ಜೀವದ ಗೆಳೆಯ ಈ ಮೂವರೂ ಮೊದಲಿನಿಂದಲೇ ಒಬ್ಬರನ್ನೊಬ್ಬರು ಅತ್ಯಂತ ಶುದ್ಧಹೃದಯದಿಂದ ಪ್ರೀತಿಸುವವರಾಗಿದ್ದರು. ಈತನ ಗೆಳೆಯನೂ ಬಾಲಸಾಧಕನು. ಅವನು ತನ್ನ ಚಿಕ್ಕಂದಿನಲ್ಲಿಯೇ ಪ್ರಾಥಮಿಕ ಶಾಲೆಯಲ್ಲಿದ್ದಾಗ ದೇವರ ಹೆಸರಿನಿಂದ ಪತ್ರಗಳನ್ನು ಬರೆದು, ಗಾಳಿಯಲ್ಲಿ ತೂರುತ್ತಿದ್ದವನು. ಈಗ ರಾಮಕೃಷ್ಣರ ಸರಲ ಶಿಶುಭಕ್ತಿಯ ಸಾಧನದಲ್ಲಿದ್ದವನು. ನಮ್ಮ ನಾಯಕನೂ, ಈತನೂ ಸಮಾನಶೀಲ ವ್ಯಸನಗಳ ಮೂಲಕ ಒಬ್ಬರಿಗೊಬ್ಬರು ಆಕರ್ಷಿತರಾದದ್ದು ಇದೇ

ಈಗ ಹೊಸದಾಗಿಯೇನೂ ಅಲ್ಲ; ಹತ್ತೆಂಟು ವರುಷಗಳ ಹಿಂದೆಯೇ ಕೂಡಿಕೊಂಡಿದ್ದಾರೆ. ಇನ್ನು ಜ್ಞಾನಭಿಕ್ಷುವಿನ ಸತಿಯು ಕೂಡ ಹೊರಗಿನಿಂದ ಹೊಸಬಳಾಗಿ ಬಂದವಳಲ್ಲ. ಈತನ ಸೋದರತ್ತೆಯ ಮಗಳಾಗಿ ಮನೆಯಲ್ಲಿಯೇ ಹುಟ್ಟಿ ಬೆಳೆದವಳು. ಇವಳು ತನ್ನ ಪ್ರಿಯ ಪತಿಯ ಮೇಲೆ ಮಮತೆಯಿರುವಂತೆ, ಆತನ ಜೀವನ್ಮಿತ್ರನ ಮೇಲೆ ಕೂಡ – ಗಂಡನ ಗೆಳೆಯನೆಂದೂ, ಶುದ್ಧಜೀವಿಯೆಂಬೂ ಅಕ್ಕರತೆಯ ಪ್ರೇಮವಿತ್ತು. ಆ ಮಿತ್ರನೂ ಕೂಡ ಹೀಗೆಯೇ ಇವಳು ತನ್ನ ಮಿತ್ರನ ಸತಿಯೆಂದೂ, ಶುದ್ಧ ಸರಲಜೀವಿಯೆಂದೂ ಅಕ್ಕತಂಗಿಯಂತೆ ಪ್ರೀತಿ ಸುತ್ತಿದ್ದನು. ಇನ್ನು ನಮ್ಮ ನಾಯಕನು ಇವರಿಬ್ಬರೊಡನೆ ಹೇಗೆ ನಡೆದುಕೊಳ್ಳುತ್ತಿದ್ದನೆಂದರೆ – ತನ್ನ ಸಾಧಕಜೀವನದ ಅರ್ಥವು ತನ್ನ ಸತಿಗೂ ಸಂಪೂರ್ಣವಾಗಿ ತಿಳಿಯುತ್ತ ಬಂದರೆ, ಹಳಬರಂತೆ ಹೆಂಡಿರನ್ನು ತೊರೆದು ಹೋಗುವ ವೈರಾಗಿಯಾಗುವ ಕಾರಣವು ಉಳಿಯಲಾರದೆಂದೂ ತನಗೆ ಐಹಿಕದ ಅರ್ಧಾಂಗಿಯಾದವಳು, ಪಾರಮಾರ್ಥಿಕದ ಸಹಧರ್ಮಿಣಿಯೂ ಆದರೆ ಮಾತ್ರ ಕೂಡಿನ್ನರ ಸಾಫಲ್ಯವೆಂದೂ ಅರಿತು, ಒಂದಿನಿಂದಲೂ ಅವಳೊಡನೆ ಶುದ್ಧವಾಗಿ–ಸ್ಪಷ್ಟವಾಗಿ–ಸರಲವಾಗಿ–ಸಹಜವಾಗಿ–ಸಮರಸವಾಗಿ ಇರಲಿಕ್ಕೆ ಯತ್ನಿಸುತ್ತಿದ್ದನು. ತನ್ನ ಜೀವನ್ಮಿತ್ರನೊಡನೆ ಸಮಾನಶೀಲ ವ್ಯಸನಗಳ ಮೂಲಕ ಸಹಜ-ಸಮರಸದಿಂದ ಇರುತ್ತಿದ್ದನು. ಒಂದೇ ದಾರಿಯ ಇಬ್ಬರು ಪುರುಷರು ಬಹಳ ಅನ್ಯೋನ್ಯವಾಗಿ ಕೂಡಿ ಇರಬಹುದು. ಆದರೆ ಸ್ತ್ರೀಯರಿಗೆ ಬುದ್ಧಿ ಬೆಳೆಯಲಿಕ್ಕೇ ಅವಕಾಶ ಸಿಕ್ಕದಿರುವದರಿಂದ ಸಂಸ್ಕಾರವೇ ಇಲ್ಲದಂಥ ಅಸಂಖ್ಯಾತ ಜೀವಿಗಳಿಗೆ, ಇಂಥ ವೇಗವಂತ ಧ್ಯೇಯವಾದಿಗಳ ಬೆನ್ನುಹತ್ತುವದಕ್ಕೇ ಸಾಧ್ಯವಿರುತ್ತಿರುವದಿಲ್ಲ. ಅಗಸ್ಟೀನನು ತನ್ನ ಜೀವನದಲ್ಲಿ ನಡೆದ ಇಂಥದೊಂದು ಪ್ರಸಂಗವನ್ನು ಹೀಗೆ ವರ್ಣಿಸಿರುವನು:—

“ ಮಾನವಜೀವಿತದ ಘೋರಸ್ವರೂಪವನ್ನು ಕುರಿತು, ನಾವು ಕೆಲವು ಜನ ಸ್ನೇಹಿತರು ಕೂಡಿಕೊಂಡು ತರ್ಕಿಸು ತ್ತಲೂ ವಿಷಾದಿಸುತ್ತಲೂ ಇದ್ದೆವು. ಭೂಲೋಕದ ಭಯಾನಕ ಪರಿ ಸ್ಥಿತಿಯಿಂದ ದೂರವಾಗಿರುವ ಯಾವದಾದರೊಂದು ಸ್ಥಳದಲ್ಲಿ ಗೆಳೆಯು ರಾದ ನಾವೆಲ್ಲರೂ ಏಕೀಭವಿಸಿ, ಶಾಂತವಾಗಿ ಜೀವಿಸಬೇಕೆಂದು ನಿಶ್ಚಯಿಸಿಕೊಂಡೆವು. ನಮ್ಮ ಆಸ್ತಿ-ಪಾಸ್ತಿಯನ್ನೆಲ್ಲಾ ಹುದುವಾದ ಒಂದೇ ಗಂಟಾಗಿ ಮಾಡಿಟ್ಟುಕೊಂಡು, ತನ್ನದೂ ನನ್ನದೂ ಎಂಬ ಭೇದವಿಲ್ಲದೆ ಸರ್ವರೂ ಒಂದಾಗಿದ್ದುಕೊಂಡು ಜೀವಿಸುವದ ರಿಂದ ನಮಗೆ ಸುಖಶಾಂತಿಯು ದೊರಕುವದೆಂದು ಭಾವಿಸಿ ದೆವು. ಈ ಪ್ರೇಮಸಮಿತಿಗೆ ಸುಮಾರು ಹತ್ತು ಜನರು ಸೇರಬಹು ದೆಂದೂ ಗಣನೆ ಮಾಡಿದೆವು. ಈ ಮಾತಿಗೆ ಎಲ್ಲರೂ ಒಪ್ಪಿದೆವು. ಈ ಗೆಳೆ ಯರ ಗುಂಪಿಗೆ ವರುಷಕ್ಕೆ ಇಬ್ಬಿಬ್ಬರು ಸರತಿಯ ಮೇರೆಗೆ ಉಗ್ರಾ ಣಿಕರಾಗಬೇಕೆಂದೂ ನಿರ್ಣಯವಾಯಿತು. ಆದರೆ ಈ ಹತ್ತು ಮಂದಿ ಯಲ್ಲಿ ಕೆಲವರು ವಿವಾಹಿತರಾಗಿಯೂ ಇನ್ನು ಕೆಲವರು ಮದುವೆ ಯಾಗಲಿಕ್ಕಿರುವವರಾಗಿಯೂ ಇದ್ದುದರಿಂದ ನಾವು ಮಾಡಿಕೊಂಡ ವಿಚಾರವು ಆ ನಮ್ಮ ಪತ್ನಿಯರಿಗೆ ಹಿಡಿಸಲಾರದೆ ಹೋದೀ ತೆಂದು ಗ್ರಹಿಸಿದೆವು. ಕೂಡಲೇ ನಮ್ಮ ಆಲೋಚನೆಯೆಲ್ಲಾ ನಿರರ್ಥಕವಾಯಿತು ! ”

ಒಬ್ಬನು ಅಂತಃಕರಣಪೂರ್ವಕವಾಗಿ ಇನ್ನೊಬ್ಬನನ್ನು ಪ್ರೀತಿಸ ಹತ್ತಿದರೆ, ಆ ಮತ್ತೊಬ್ಬನು ಈತನನ್ನು ಸಹಜವಾದ ಆಕರ್ಷಣದ ಮೂಲಕ ಪ್ರೀತಿಸತೊಡಗುವದು ಸ್ವಭಾವಧರ್ಮವಾಗಿದೆ. ಆದರೆ ಆ ಉಭಯವ್ಯಕ್ತಿಗಳ ಬುದ್ಧಿಸಂಸ್ಕಾರವು ಸಮಾನವಾಗಿರದಿದ್ದರೆ ಬಹಳ ಗದ್ದಲಕ್ಕಿಡುತ್ತದೆ! ಒಬ್ಬನಿಗೆ ಒಂದು ಮಾತು ಸುಲಭವಾಗಿ ಹೊಳೆದರೆ, ಇನ್ನೊಬ್ಬನಿಗೆ ಅದರ ಅರ್ಥವೇ ಆಗುತ್ತಿರುವದಿಲ್ಲ. ಆದುದ

ರಿಂದ ಒಬ್ಬನಿಗೆ ಒಂದು ಸರಿಯೆನಿಸಿದರೆ ಇನ್ನೊಬ್ಬನಿಗೆ ಅದೆಷ್ಟೊ ಸಮ್ಮತವಾಗುವದಿಲ್ಲ. ಒಬ್ಬನಿಗೆ ಹೀಗೆಂದು ಹೊಳೆದರೆ, ಇನ್ನೊಬ್ಬನಿಗೆ ಹಾಗೆಂದು ಹೊಳೆಯುತ್ತದೆ. ಹೀಗಾಗಿ ಮತಭೇದ ಹುಟ್ಟುತ್ತದೆ. ಇಷ್ಟಕ್ಕೆ ನಿರಾಶರಾದರೆ ಅಂಥವರ ಪ್ರೇಮರಥವು ಇಲ್ಲಿಗೇ ಮುಗ್ಗರಿಸುತ್ತದೆ. ಬುದ್ಧಿಭೇದದ ಮಾತು ಹೀಗಿದ್ದರೆ, ಹೃದಯವಿಕಾಸದ ತಾರತಮ್ಯದಿಂದಾಗುವ ಅಸಾಮ್ಯತವು ಇನ್ನೊಂದು ವಿಧವಾಗಿದೆ. ಒಂದು ಮಾತಿನಿಂದ ಒಬ್ಬನ ಹೃದಯವು ಕರಗಿ ಹೋಗುತ್ತಿದ್ದರೆ, ಇನ್ನೊಬ್ಬನಲ್ಲಿ ಅದರ ಪರಿಣಾಮವೇ ತೋರುವದಿಲ್ಲ. ಒಬ್ಬನ ಹೃದಯಕ್ಕೆ ಅತಿ ಸೂಕ್ಷ್ಮವಾದ ಭಾವಗಳೂ ಕೂಡ ತಟ್ಟುತ್ತಿದ್ದರೆ, ಇನ್ನೊಬ್ಬನ ಹೃದಯವನ್ನು ಅತಿ ಗಾಢವಾದ ತೆರೆಗಳೂ ಕೂಡ ಕೆರಳಿಸುವದಿಲ್ಲ. ಹೀಗಾಗಿ ಒಮ್ಮೊಮ್ಮೆ ನಾವು ನಮ್ಮ ಪ್ರಿಯವ್ಯಕ್ತಿಯ ವಿಷಯದಲ್ಲಿ ಎಷ್ಟು ನಿಷ್ಠುರರಾಗಿ ಬಿಡುವೆವೆಂದರೆ– ಇಂಥ ಕಲ್ಲಿನ ಕೂಡ ಬಾಳುವದಕ್ಕಿಂತ ಕಾಷುಪಾಲಾಗಿ ಹೋಗುವದು ಮೇಲೆಂದು ಭಾವಿಸಿಕೊಂಡು, ನಿರಾಶೆಯ ಅಂಥಂತಮುಸ್ಸಿಗೀಡಾಗುತ್ತಿರುತ್ತೇವೆ. ಇದು ಹೃದಯಭೇದವಾದರೆ, ಇನ್ನು ವಾಸನಾಭೇದದ ಪ್ರಕಾರವು ಇದಕ್ಕಿಂತ ವಿಚಿತ್ರವಾಗಿದೆ. ಒಬ್ಬನಲ್ಲಿ ಯಾವ ವಿಕಾರಗಳೂ ಹೆಚ್ಚಾಗಿ ಹುಟ್ಟುವದಿಲ್ಲವಾದರೆ ಇನ್ನೊಬ್ಬನು ಸದಾ ವಿಕಾರವಶನಾಗುತ್ತಿರುವದುಂಟು. ಒಬ್ಬನು ಯಾವುದಕ್ಕೂ ಧೀರನಾಗಿದ್ದರೆ, ಇನ್ನೊಬ್ಬನು ಪ್ರತಿಯೊಂದಕ್ಕೆ ಆತುರನಾಗಿರುತ್ತಿರುವದುಂಟು. ಇಷ್ಟೊ ಅಲ್ಲದೆ ಒಬ್ಬನ ನಿಗ್ರಹಶಕ್ತಿಯು ಸಹಜಸ್ವಾಭಾವಿಕವಾಗಿದ್ದರೆ, ಇನ್ನೊಬ್ಬನಲ್ಲಿ ಎಷ್ಟು ಪ್ರಯತ್ನಿಸಿಯೂ ಅದರ ಸುಳಿವು ಕೂಡ ಹತ್ತುತ್ತಿರುವದಿಲ್ಲ. ಹೀಗಾಗಿ ಒಬ್ಬರಿಗೊಬ್ಬರು ದೂಷಣೆಯಿಡುತ್ತ, ಬರಬರುತ್ತ ಉಗ್ರವಿರೋಧಿಗಳಾಗಿ ಒಬ್ಬರಿಂದೊಬ್ಬರು ದೂರ ಸರಿದುಬಿಡಬಹುದು. ಇದೂ ಅಲ್ಲದೆ, ಒಬ್ಬನು ಒಂದು ಕಾಲದಲ್ಲಿ ಯಾವುದೋ ಕಾರಣದಿಂದ ಉಲ್ಲಾಸವು

ಳ್ಳವನಾಗಿದ್ದರೆ, ಇನ್ನೊಬ್ಬನು ಅದೇ ಕಾಲದಲ್ಲಿ ಇನ್ನಾವದೋ ಕಾರಣ ದಿಂದ ವ್ಯಾಕುಲನಾಗಿರಬಹುದು. ಆಗ ಒಂದೇ ಸಂಗತಿಯು ಒಬ್ಬನಿಗೆ ಪ್ರಿಯಕರವಾಗಿಯೂ ಇನ್ನೊಬ್ಬನಿಗೆ ಹೇಯವಾಗಿಯೂ ತೋರ ಬಹುದು. ಇಂಥ ಪ್ರಸಂಗದಲ್ಲಿ ಒಬ್ಬನು ಇನ್ನೊಬ್ಬನ ವಿಷಯದಲ್ಲಿ ಹೀಗೆ ದೂರಿಕೊಳ್ಳುತ್ತಿರುತ್ತಾನೆ– "ನನಗೆ ಬೇಕೆನಿಸುತ್ತಿದ್ದದ್ದು ಈತನಿಗೆ ಯಾವಾಗಲೂ ಬೇಡಾದ ಮಾತೇ ಆಗುತ್ತಿರುತ್ತದೆ. ಇದೇತರ ಪ್ರೇಮ! ಎಂಥಾ ಐಕ್ಯ !! ? ಸುಡುಗಾಡು !!! " ಹೀಗಾಗಿ ಒಬ್ಬರಿಗೊಬ್ಬರು ಮುನಿದುಕೊಳ್ಳುತ್ತಿರುತ್ತಾರೆ.

ಪ್ರೇಮಕಲಹದ ಕಾರಣಗಳೆಲ್ಲಾ ಇದೇ ಜಾತಿಯವಾಗಿರು ತ್ತವೆ. ಅಲ್ಲದೆ ಸರ್ವಮಾನವರಿಗೆ ಒಂದೇ ಸಮಾನವಾಗಿರುವ ಇನ್ನೂ ಕೆಲವು ಮನೋಮಾಲಿನ್ಯಗಳಿವೆ. ಶುದ್ಧಾಂತಃಕರಣದ ಪ್ರೇಮಸಾಧ ಕರ ಐಕ್ಯಕ್ಕೆ ಇವೇ ವಿಘ್ನಗಳು. ಅವರ ಹೃದಯಗಳೇನೋ ಒಳಗಿನ ಒಳಗಿನ ಆಳದಲ್ಲಿ ಬೆಸೆಯಲ್ಪಟ್ಟಿರುತ್ತವೆ. ಆದರೆ ಈ ಮೇಲುಮೇಲಿನ ವೈಷಮ್ಯದಲ್ಲಿ ಒಮ್ಮೊಡಿ ಪ್ರಾಣ ಕಳಕೊಳ್ಳುತ್ತಿರುತ್ತವೆ. ಇಂಥ ಕಾಲ ದಲ್ಲಿ ಒಂದೇ ಉಪಾಯವು ಪ್ರಯೋಜನಕಾರಿಯಾಗಿರುತ್ತದೆ. ಒಬ್ಬರಿ ಗೊಬ್ಬರು ಎಷ್ಟೇ ಮುನಿಯುವಂಥ ಪ್ರಸಂಗ ಬಂದರೂ ಅವರಿಬ್ಬರೂ ಕೂಡಿ ಹೊಟ್ಟೆಯನ್ನು ಬಿಚ್ಚಿ, ತಮ್ಮ ತಮ್ಮ ಸಂದೇಹಗಳನ್ನೆಲ್ಲ ಹೊರಗೆಡವಬೇಕು. ಆಗ ತಪ್ಪುತಿಳುವಳಿಕೆಗಿಂತ ಹೆಚ್ಚಿನ ಕಾರಣವೇ ಇರಲಿಲ್ಲವೆಂದು ಗೊತ್ತಾಗುವದು.

ನಮ್ಮ ಕಥಾರಾಜ್ಯದ ಈ ತ್ರಿಮೂರ್ತಿಗಳು ತಮ್ಮ ಪ್ರೇಮದ ಪ್ರಯೋಗಶಾಲೆಯಲ್ಲಿ ಎಷ್ಟೋ ಸಾರೆ ಹತಾಶರಾಗಿ, ಕೊರಗಿ ಮರುಗಿ,

ಕೊನೆಗೆ ಒಳಒಳಗಿನ ಸಾಮರಸ್ಯದ ಗರ್ಭಗುಡಿಯನ್ನು ಪ್ರವೇಶಿಸಿದರು.* ಆದರ ಕಥೆಯೊಂದು ರಾಮಾಯಣವೇ ಆಗುವಷ್ಟಿದೆ. ಆದರೂ ಅವಸರದ ಮೂಲಕ ಅವರ ಪ್ರಯೋಗದ ಫಲಿತಾರ್ಥವನ್ನು ಮಾತ್ರ ಹೇಳಿ ಮುಗಿಸುವೆನು.

ಈ ತ್ರಯಿಯಲ್ಲಿ ಒಂದೊಂದು ವ್ಯಕ್ತಿಯೂ, ಒಂದೊಂದು ಭಿನ್ನ ಪ್ರಕೃತಿಯಿಂದ ಕೂಡಿದ್ದಾಗಿದೆ. ನಮ್ಮ ನಾಯಕನು ವ್ಯಾಸಂಗಿ. ಮಹತ್ವಾಕಾಂಕ್ಷಿ ಆದರೆ ಅನಿಗ್ರಹಿ. ಈತನ ಮಿತ್ರನು ಅಲ್ಪವ್ಯಾಸಂಗಿ ಆದರೆ ಮಹಾವ್ರತಿ. ನಾಯಕನ ಸತಿಯು ಅಶಿಕ್ಷಿತಳು, ಅರಿಯದವಳು; ಆದರೆ ಸ್ವಾಭಾವಿಕವಾಗಿ ನಿರ್ವಿಕಾರಳು. ಹೀಗೆ ಮೂವರೂ ಮೂರು ವಿಧವಾಗಿದ್ದರಿಂದ ಇವರ ಪ್ರೇಮಪ್ರಯೋಗವು ಎಷ್ಟೋ ಸಾರೆ ಮೂರಾಬಟ್ಟಿಗೆ ಬಂದು ಬಂದು, ಶುದ್ಧ ಹೃದಯವೊಂದು ಸರ್ವರಿಗೂ ಸಮಾನವಾಗಿದ್ದರಿಂದ ಗಮ್ಯಕ್ಕೆ ಬಂದು ಮುಟ್ಟಿದರು. "ಶತ ಶತವಿರೋಧಗಳಲ್ಲಿಯೂ ಇಂಥವರ ಆಂತರಿಕ-ಐಕ್ಯವು ಜೀವಂತವಾಗಿ ಉಳಿದುಕೊಂಡಿರುತ್ತದೆ" ಎಂದು ಹೇಳಿದ ಅರವಿಂದರ ಮಾತು, ಇವರಿಗೀಗ ಮನಗಂಡ ಮಾತಾಯಿತು.

ಲೋಕದಲ್ಲಿ ಎಲ್ಲರೂ ಜಗತ್ತೆಂದರೆ ತಮ್ಮಂತೆಯೇ ಇದೆಯೆಂದು ಭಾವಿಸಿ ಬಹಳ ಅನರ್ಥಕ್ಕೆ ಈಡಾಗುತ್ತಾರೆ. ಕಾಮುಕನು, "ಜಗತ್ತಿ

---

* ಬಾಯ್ಬಲಿನ ಹೊಸ ಒಡಂಬಡಿಕೆಯಲ್ಲಿ ಸೆಂಟ್ ಜಾನ್ ಎಂಬ ಕ್ರೈಸ್ತ ಸಾಧುವು ಹೀಗೆ ಹೇಳುತ್ತಾನೆ: —

"Love is of God; and every one that loveth is begotten of God, and knoweth God." (Love has its origin in God, and everyone who loves is a child of God and has begun to know God.)

"ಪ್ರೇಮದ ನಿಜಧಾಮವು ದೇವದೇವನೇ. ಆದ್ದರಿಂದ ಪ್ರೇಮಪೂರ್ಣರು ಅವನವರು. ಅಲ್ಲದೆ ಅವರು ಅವನನ್ನು ಅರಿಯುವರು."

ನಲ್ಲಿ ಎಲ್ಲರೂ ಒಳಒಳಗಾಗಲಿ, ಹೊರಹೊರಗಾಗಲಿ ಪ್ರಖರ ಕಾಮುಕರೇ ಆಗಿದ್ದಾರೆ. ಅದನ್ನು ತಡೆಯುವದಕ್ಕೆ ಯಾರಿಗೂ ಸಾಧ್ಯವಿಲ್ಲ, ತಡೆದಿರುವೆವೆನ್ನುವವರು ಠಕ್ಕರು '' ಎಂದು ಹೂಲಿಯನ್ನೆಬ್ಬಿಸುವನು. ನಿರ್ವಿಕಾರಿಯು ವಿಕಾರಿಗಳ ವಿಷಯದಲ್ಲಿ– '' ಎಲಾ! ಇವರು ಹೀಗೆ ಯಾಕೆ ಕುಣಿದಾಡುತ್ತಿದ್ದಾರು ?! ಇವರ ಮಂಗಾಟಿಕೆಯ ಅರ್ಥವೇನು ? ಸೊಟ್ಟ ಇಂದ್ರಿಯಭೋಗಗಳಿಗೆ ಇಷ್ಟೊಂದು ಮರುಳಾಗುವದೇ ? ಅದರಲ್ಲಿರುವ ಅಂಥಾ ಚಿರಸುಖವಾದರೂ ಏನು ??? ಇವರಿಗೆ ಬುದ್ಧಿಯಿಲ್ಲ–ಮೂರ್ಖರು ! '' ಎಂದು ಜುಗುಪ್ಸೆಪಡುವನು. ವ್ರತಿಕಸ್ವಭಾವದವನು ಅನಿಗ್ರಹಿಗಳ ವಿಷಯದಲ್ಲಿ – '' ಇವರಿಗೆ ಏನೂ ಇಲ್ಲ-ಮೈಯಲ್ಲಿ ಸೊಕ್ಕು ಇದೆ ಸೊಕ್ಕು ! ಮಕ್ಕಳಿಗೆ ತಡೆಯುವದಕ್ಕೇ ಆಗುವದಿಲ್ಲವಂತೆ! ನಾಲ್ಕು ಒದಿಕೆ ಕೊಟ್ಟರೆ ತಡೆಯುವದು ಬಿಟ್ಟು ಪದಾ ಹೇಳುತ್ತಾರೆ! ಅದು ಹೇಗೆ ತಡೆಯುವದಾಗುವದಿಲ್ಲವೋ ನೋಡೋಣ! ಮೈಸೊಕ್ಕು–ಮೈಸೊಕ್ಕು!! ಮೈಗಳ್ಳ ಬದ್ಡೀ ಮಕ್ಕಳು ! '' ಹೀಗೆಂದು ರೊಚ್ಚಿಗೇಳುತ್ತಾನೆ. ಆದರೆ ಮಾನವಸ್ವಭಾವಗಳ ರಹಸ್ಯಗಳ ಪರಿಚಯವಾದ ಮೇಲೆ '' ಅವರವರ ಸ್ವಭಾವವೇ ಹಾಗೆ ಅದೆ '' ಯೆಂದುಕೊಂಡು ಸಮಾಧಾನ ತಾಳುವನು. ಈ ವಿಷಯದಲ್ಲಿ ಗೀತೆಯು ಹೇಳುತ್ತದೆ:—

'' ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।
ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ?॥ ''

ಜ್ಞಾನಿಗಳೂ ಕೂಡ ತಮ್ಮ ಸ್ವಭಾವದಂತೆ ಸಾಗುತ್ತಾರೆ. ಜೀವಮಾತ್ರರೆಲ್ಲ ಪ್ರಕೃತಿವಶರಾಗಿರುವಾಗ ನಿಗ್ರಹವು ಏನು ಮಾಡುವದು ? ನಿಗ್ರಹನೀತಿಗಿಂತ ಸ್ವಭಾವಪರಿವರ್ತನಕ್ಕೆ ಹೆಚ್ಚು ಲಕ್ಷ್ಯ ಕೊಡಬೇಕೆಂಬದು ಗೊತ್ತಾಗಲಾರದ್ದರಿಂದಲೇ ನಾವು ಜೀವನವನ್ನು ಘೋರಸ್ವರೂಪಕ್ಕೆ ತಂದುಕೊಳ್ಳುವೆವು.



# ೧೩. ರೌದ್ರಕರುಣೆ.

ಈಗ ನಾಯಕನಿಗೆ ಇಪ್ಪತ್ತಾರನೇ ವರುಷ. ಸುಮಾರು ಈ ವಯಸ್ಸಿಗೆ ದೀರ್ಘವಾದ ರೋಗವುಂಟಾಗಿ ಮರಣವೊದಗುವದು ಈತನ ಆನುವಂಶಿಕ ಕ್ರಮವಾಗಿತ್ತು. ಪದ್ಧತಿಯಂತೆ ಈತನಿಗೂ ಬಂತು. ಆಗ ಜ್ಞಾನಭಿಕ್ಷುವು ಮತ್ತೆ ಮರಳಿ ಅಗಾಧಕೂಪದಲ್ಲಿ ಹೊರಳಿದನು. ಸರ್ವಸಿದ್ಧತೆಯನ್ನು ಮಾಡಿಕೊಳ್ಳುವಷ್ಟರೊಳಗಾಗಿ ಹೊತ್ತು ಮುಳುಗಿದಂತಾಯಿತು.

"ಅಹಾ ಇನ್ನೆಲ್ಲಿ ಪೂರ್ಣಾನುಭವದ ಆಶೆ? ನನ್ನ ಜನ್ಮವು ವ್ಯರ್ಥವಾಯಿತು! ಪೂರ್ಣಾನುಭವವಿಲ್ಲದ ಸಾವು, ಶಾಂತಿಯಿಲ್ಲದ ಸಾವು, ನಡುವೇ ಬಂದು ಎಳೆದ ಸಾವು ನನಗೆ ಸುಖಕರವಾದೀತೆ! ಕೆಟ್ಟೆ ಕೆಟ್ಟೆ–ದೇವನನ್ನು ಕರುಣಾಕರನೆಂದು ನಂಬಿ ಕೆಟ್ಟೆನಲ್ಲಾ? ನನ್ನ ಜನ್ಮವು ಅವನ ಕರುಣೆಯ ಭರವಸದಿಂದ ಕುಸಿದು ಹೋಯಿತಲ್ಲಾ! 'ಏನೋ' ಎನ್ನುತ್ತಿದ್ದಂತೆ ಆತನು ನನ್ನ ಪಾಲಿಗೆ **'ಏನೋ'** ಆಗಿಯೇ ಬಿಟ್ಟನಲ್ಲದೆ, ಆತನ ಕರುಣೆಯ ಪ್ರತೀತಿ ನನಗೆ ತೋರಲೇ ಇಲ್ಲವಲ್ಲಾ! ಅಹಾ! ನಿನ್ನ ಕರುಣೆ ಕೈಬಿಡದೆಂದು ಭಾವಿಸಿದ್ದೆನಲ್ಲಾ! ಇನ್ನೆಲ್ಲಿಯ ಆಶೆ, ಇನ್ನೆಲ್ಲಿಯ ಭರವಸೆ? ಮುಗಿಯಿತು, ಮುಗಿಯಿತು! ತಂದೇ, ನಿನ್ನ ವಿರಹದುರಿಯಲ್ಲಿ, ಅಸ್ತವ್ಯಸ್ತವಾಗಿದ್ದ ನನ್ನ ಉಡಿಗೆ ತೊಡಿಗೆಗಳನ್ನು ಪಂಥದಿಂದ ದ್ರೌಪದಿಯ ಮುಡಿಯಂತೆ, ಹಾಗೇ ಬಿಟ್ಟುಗೊಟ್ಟಿದ್ದೆನಲ್ಲಾ! ಇನ್ನೆಲ್ಲಿಯ ನನ್ನ ಪಂಥ, ಇನ್ನೆಲ್ಲಿಯ ನನ್ನ ಹಟ? ತಂದೇ ನನ್ನ ಹಟವನ್ನು ನಡಿಸಿಕೊಡುವಿಯೆಂದು ನಂಬಿದ್ದೆನಯ್ಯೋ! ನೀನು ನನ್ನ ಹಿರಿಯಾಸೆಯನ್ನು ಲೆಕ್ಕಿಸಲಿಲ್ಲವಲ್ಲಾ! ತಂದೇ ನಿನ್ನ ಕರುಣವನ್ನು ನಾನಿಂದು ನಂಬಲಾರೆ ನಂಬಲಾರೆ! ನೀನಿರುವದು ನಿಜವಾಗಿದೆಯಾದರೂ ನಿನ್ನ ಬಿರುದು ನಿಜವೆಂದು ನಂಬಲಾರೆ! 'ಕರುಣಾ

ಸಾಗರಾ!' ಆಹಾ! 'ಸಾಗರ'–ಉಗ್ರ ಜಂತುಗಳ ತವರೂರು! ಭಯಾನಕ ರೌದ್ರದ ನಿಧಿ! ಅಹುದಹುದು! ನಿನ್ನ ಕರುಣೆ– **ಭಯಾನಕಕರುಣೆ!** ರೌದ್ರಕರುಣೆ!! ಭೀಷಣಕರುಣೆ!!! ಭಯಂಕರ ಕರುಣೆ!!!! ಹೆದರಿಸುವ ಕರುಣೆ–ಬೆದರಿಸುವ ಕರುಣೆ–ಚೆದರಿಸುವ ಕರುಣೆ! ಕಾಳರುದ್ರಾ, ಕರಾಳರುದ್ರಾ, ನಿನ್ನ ಗುಣಕ್ಕೆ 'ಕರುಣ'ವೆಂದು ಯಾವ ಕರುಣಿ ಕರೆದನೋ ಕಾಣೆ!

"ತಂದೇ, ನಾನು ಭಕ್ತಿಪಥವನ್ನು ಹಿಡಿಯದೆ ಯೋಗಪಥದ ರಾಜಮಾರ್ಗವನ್ನು ಹಿಡಿದಿದ್ದರೆ ತುಸುವಾದರೂ ಗತಿಗಾಣುತ್ತಿದ್ದೆನಲ್ಲಾ! ದೈಹಿಕವ್ಯಾಯಾಮದಿಂದ ದೇಹ ಬಲಿಯುವದು ಬಲ್ಲೆ–ಅದರಂತೆ ಮಾನಸವ್ಯಾಯಾಮದಿಂದ ಅಂತರ್ಮಾನಸವು ಅರಳಬಹುದೆಂದೂ ಊಹಿಸುವೆ. ಆದರೆ ಭಕ್ತಿಪಥದಲ್ಲಿ ಅತ್ತತ್ತು ಸತ್ತು ಹೋಗುವದಕ್ಕಿಂತ ಹೆಚ್ಚಿನದಾವದನ್ನೂ ನಾನು ಕಾಣಲಿಲ್ಲವಲ್ಲಾ! ಯೋಗಪಥದಲ್ಲಿ ದಿನದಿನಕ್ಕೊಂದು ಹೊಸ ಹೊಸ ಪ್ರತೀತಿಗಳನ್ನು ಕಂಡು, ಶ್ರದ್ಧೆ ಬಲಿಯುವ ಆಶೆಯಿದ್ದರೆ, ಭಕ್ತಿಮಾರ್ಗದಲ್ಲಿ ದಿನದಿನಕ್ಕೊಂದು ವಿಪತ್ತಿನ ಬಾಯಿಗೆ ಬೀಳುತ್ತ, ಇದ್ದ ಶ್ರದ್ಧೆಯನ್ನು ಕಳಕೊಳ್ಳುವದಕ್ಕಿಂತ ಹೆಚ್ಚಿಗೆ ಏನಿದೆಯೆನ್ನಲಿ? ತಂದೇ! 'ಮಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಇಳೆ ನಿಮ್ಮ ದಾನ' ಎಂದು ಹಿರಿಹಿರಿ ಹಿಗ್ಗಿದ ಶರಣರು, ನೀನಿದ್ದದ್ದೇ ನಿನ್ನ ದೊಡ್ಡ ದಾನವಾಗಿ ಸಂತೃಪ್ತರಾದರೆಂದು ನಾನೆನ್ನುವೆ! ಭಲೇ! ಅಗಾಧಕರುಣೀ!! ಶಿಶುವು ಹುಟ್ಟುವದಕ್ಕೆ ಮೊದಲೇ ತಾಯಿಯ ಸ್ತನಗಳಲ್ಲಿ ಹಾಲನ್ನಿಟ್ಟ ಪರಮದಯಾಳು ನೀನು, ನಿನ್ನ ನೆಲೆಯಿಲ್ಲದೆ ಕಸವಿಸಿಪಡುತ್ತಿರುವ ಭಕ್ತರನ್ನು ಬೀಳುಗಳೆಯುವದು ನಿನ್ನ ಧರ್ಮ! ಶುದ್ಧ ಕರುಣಾಳು!!

"ತಂದೇ! ನಿನ್ನ ಕರುಣದ ಭರವಸದಿಂದ ಕೆಟ್ಟೆನಲ್ಲಾ! ಆದರೆ ಈಗೇನು ಗತಿ? ಭಕ್ತಿಪಥದಲ್ಲಿ ಕೆಟ್ಟು, ಯೋಗಪಥಕ್ಕೆ ಕೈಯೊಡ್ಡ

ಬೇಕೆಂದರೆ, ಇನ್ನೆಲ್ಲಿಯ ಆ ಬಲವು ? ಒಂದು ವ್ಯವಹಾರದಲ್ಲಿ ಹಾನಿಯಾಗಿ ಮನೆಮಾರುಗಳನ್ನು ಕಳಕೊಂಡು, ಇನ್ನೊಂದರಲ್ಲಿ ಲಾಭವೆಂದೆನಿಸಿ, ಇದ್ದದ್ದನ್ನು ಬಿಟ್ಟು ಇಲ್ಲದ್ದಕ್ಕೆ ಹೊರಟರೆ ಹೊಸ ವ್ಯವಹಾರಕ್ಕೆ ಹೊಸ ಹುರುಪು ಎಲ್ಲಿಂದ ಬರಬೇಕು ? ನಾನು ಹೂಡಿದ ವ್ಯವಹಾರವು ಮುರುಕಳಿಗೆ ಬಂದಿತಲ್ಲಾ ! ಹೊಸದಕ್ಕೆ ಆಶಿಸಿ ಫಲವಿಲ್ಲವಲ್ಲಾ ! ಇದ್ದದ್ದು ಹುಳಿತುಹೋಯಿತು ! ಇಲ್ಲದ್ದು ದೂರ ಉಳಿಯಿತು !! ಮೃತ್ಯುವು ಬಾಯ್ದೆರೆದು ಮೈಮೇಲೆ ಬಂತು !!! ಬಟ್ಟೆಗೇನು ? ಅತೋ ಭ್ರಷ್ಟಸ್ತತೋ ಭ್ರಷ್ಟಃ !!!

"ತಂದೇ, ನಿನ್ನ ನಂಬಿ ಕೆಟ್ಟವರಿಲ್ಲವೆಂದು ತಿಳಿದಿದ್ದೆನಲ್ಲಾ ! ಅಯ್ಯೋ ಕೆಟ್ಟೆ ಕೆಟ್ಟೆ ! ಕೆಟ್ಟವರಾರಾದರೂ ಮೊದಲೇ ನನಗೆ ಹೇಳಿಕೊಟ್ಟಿದ್ದರೆ ಉಳಿದುಕೊಳ್ಳುತ್ತಿದ್ದೆನಲ್ಲಾ ! ತಂದೇ, ಇನ್ನೇನಿದೆ? ಅಂದು ಫಲವಿಲ್ಲ ! – ಆಡಿ ಫಲವಿಲ್ಲ ! ಇಷ್ಟೆಷ್ಟು ದಿನ ಕೊಳೆಯುತ್ತ ಕಾಲ ಕಳೆಯುವದಕ್ಕಿಂತ ಹೆಚ್ಚಿಗಿನ್ನೇನೂ ಉಳಿಯಲಿಲ್ಲವಲ್ಲಾ ! ಆಯಿತು ಹೋಗು, ಆದದ್ದಾಯಿತು ! ಭಾವಭಕ್ತಿ ಕಂಡೆ, ದಿವ್ಯ ಪ್ರೀತಿಯನುಂಡೆ, ನಿನ್ನ ಕಾಣುವ ತವಕವಿತ್ತು – ಅದು ಮಾತ್ರ ಸಿದ್ಧಿಸಲಿಲ್ಲ !

"ಆಗಲಿ, ಆ ಶಬ್ದ ನಿನ್ನ ತಲೆಯ ಮೇಲುಳಿಯಿತು. ನನ್ನ ಮಟ್ಟಿಗೆ ನನ್ನ ಕರ್ತವ್ಯವೆಲ್ಲಾ ತೀರಿಹೋಗಿದೆ. ನಿನ್ನ ಕರ್ತವ್ಯವನ್ನು ನೀನು ಕಡೆಗಾಣಿಸಲಿಲ್ಲ ! 'ಜಂಬೂದ್ವೀಪ ನವಖಂಡಪೃಥ್ವಿಯೊಳಗೆ ಎರಡಾಳಿನ ಭಾಷೆಯ ಕೇಳಿರಯ್ಯಾ, ಕೊಲುವೆನೆಂಬುದು ದೇವನ ಭಾಷೆ, ಗೆಲುವೆನೆಂಬುದು ಭಕ್ತನ ಭಾಷೆ, ಸತ್ಯವೆಂಬ ಕೂರಲಗನೆ ತಳೆದು ನಿಮ್ಮ ಭಕ್ತರು ಗೆದ್ದರು ಕಾಣಾ ಕೂಡಲ ಸಂಗಮದೇವಾ." ಎಂಬ ಬಸವಣ್ಣನ ಭಕ್ತಿಯ ಬಿಂಕದಲ್ಲಿ ಇಂದು ನಾನಿರುವೆ ! ಸೋತೆ ಸೋತೆನೆಂದರೂ ನನ್ನ ಸೋಲಿನಲ್ಲೇ ನನ್ನ ಗೆಲವಿದೆ ! ಕೆಟ್ಟೆ ಕೆಟ್ಟೆನೆಂದರೂ ನನ್ನ ಕೇಡಿನಲ್ಲೇ ನನ್ನ ಒಳಿತಿದೆ ! 'ನ ಮೇ ಭಕ್ತಃ ಪ್ರಣಶ್ಯತಿ' ಎಂಬ

ನಿನ್ನ ಶಬ್ದವನ್ನು ನಿನ್ನ ತಲೆಯ ಮೇಲಿಟ್ಟು, ನಾನು ಬದಿಗಾದೆನಲ್ಲಾ! ನನ್ನ ಜನ್ಮದಲ್ಲಿ ಇಷ್ಟಾದರೂ ಆಯಿತು, ಸಾಕು. ಸಣ್ಣ ಮಾತಲ್ಲ !!

"ನನ್ನ ಅಧನ್ಯತೆಯಲ್ಲೇ ನನಗಿಂಥ ಧನ್ಯತೆಯಿದೆ ಹೋಗು ! ನಿಜವಾಗಿ ಸೋತವನು ನೀನು, – ನಿಮಿತ್ತಕ್ಕೆ ಸೋತವನು ನಾನು ! ನಿನ್ನ ಸೋಲಿಸಿ ನಾ ಸೋತೆ ಬಿಡು !! ನನ್ನ ಸೋಲಿಸಿ ನಿನಗೆ ಸೋಲು ಬಂತು ಬಿಡು !!! ಇರಲಿ ಹೋಗು. ನಿನ್ನ ಕರುಣ ನಿಷ್ಕರುಣವಾಯಿ ತೆಂಬ ಅರಿಕೆ ಮಾತ್ರ ನಿನಗಿರಲಿ ನೋಡು !!!"

ಆಯಿತು ! ನಮ್ಮ ನಾಯಕನ ಜೀವಜ್ಯೋತಿಯು ಆನುವಂಶಿಕ ರೋಗದ ಝಂಝಾವಾತಕ್ಕೆ ಆರದಿರದೆಂಬುದು ಸರ್ವರಿಗೆ ತಿಳಿದ ಮಾತಾಯಿತು. ಆಗ ಆತನಿಗೆ ಗೆಳೆಯರು – ಮಾಡುವಷ್ಟು ಮಾಡಿ ನೋಡದೆ ಬಿಡಲಿಕ್ಕಾಗದೆಂದು – ಒಂದು ನಿವಾಂತವಾದ ಅಡವಿಯೊಳ ಗಿರುವ **ಸ್ಯಾನಿಟೋರಿಯುಮ್ಮಿಗೆ** ಕರೆದೊಯ್ದರು. ಅಲ್ಲಿಯ ಡಾಕ್ಟರರು, ಈತನೊಬ್ಬ ಸಾಧಕಜೀವಿಯೆಂಬ ಆದರದಿಂದ ಅತ್ಯಂತವಾಗಿ ಹೊಣೆಯನ್ನು ವಹಿಸಿ, ಅಕ್ಕರತೆಯಿಂದಲೂ ಸ್ನೇಹಭಾವದಿಂದಲೂ ಚಿಕಿತ್ಸೆಯನ್ನು ನಡಿಸಿದರು. ಮೆಲ್ಲಮೆಲ್ಲನೆ ಗುಣವಾಗುತ್ತಲೂ ಬಂತು. ಅಲ್ಲದೆ ಇತ್ತ ಪ್ರಿಯವ್ಯಕ್ತಿಗಳ ಒಡನಾಟ, ಅತ್ತ ಗ್ರಾಮ್ಯಜಂಜಾಲ ವಿಲ್ಲದ ಮುಕ್ತ ಸೃಷ್ಟಿಯ ಅಖಂಡ ದರ್ಶನ, ಮೇಲೆ ಚತುರವೈದ್ಯರ ಸಹಾನುಭೂತಿಪೂರ್ಣಚಿಕಿತ್ಸೆ ಇಷ್ಟೆಲ್ಲಾ ಕೂಡಿ, ಜ್ಞಾನಭಿಕ್ಷುವಿನಲ್ಲಿ ಮೆಲ್ಲನೆ ನವಚೇತನವು ಮತ್ತೆ ಮೊಳಕೆಯೊತ್ತಹತ್ತಿತು !

ಆಗ ನಮ್ಮ ನಾಯಕನಲ್ಲಿ ಒಂದು ಆಲೋಚನೆಯು ಸುಳಿಯ ಹತ್ತಿತು. ಭಕ್ತಿಪಥಕ್ಕೆ ಬಿದ್ದು ತಾನು ಕೆಟ್ಟಂತೆ, ಅನ್ಯರು ಕೆಡಬಾರ ದೆಂದು ಬಯಸಿ, ಆಂಥದೊಂದು ಪುಸ್ತಕವನ್ನು ಬರೆಯಬೇಕೆಂದು ಬಯಸಿದನು. ಆ ಪುಸ್ತಕದ ವಿಷಯವೇನೆಂದರೆ – ಜಡಜಗತ್ತಿಗಿಂತ

ಹೆಚ್ಚಿನದೇನೋ ಒಂದು ಇಲ್ಲದೆ ಇಲ್ಲವಾದರೂ ಅದನ್ನು ಕರುಣಾನಿಧಿ ಯೆಂದು ಹೇಳಲಿಕ್ಕಾಗುವಂತಿಲ್ಲ. ಅದನ್ನು **'ಮಹಾನಿಯಮ' 'ಗ್ರೇಟ್ ಲಾ'** ಎಂದು ಹೇಳಬಹುದೇ ಹೊರತು, ದಯಾಸಿಂಧು ವೆಂದು ಭಾವಿಸಿ, ಅದರ ಭರವಸದಿಂದ ಜೀವನವನ್ನು ಹಾಳುಮಾಡಿ ಕೊಳ್ಳುವದರಲ್ಲಿ ಅರ್ಥವಿಲ್ಲ–ಇದೊಂದು ಮಾತು. ಇನ್ನೊಂದು ವಿಷಯ ವೇನೆಂದರೆ:– ಒಂದೊಂದು ಪ್ರಾಣಿಗೆ ಜನ್ಮಸಿದ್ಧವಾದ ಒಂದೊಂದು ವಿಶಿಷ್ಟಸ್ವಭಾವವಿರುವದರಿಂದ ಅದರದರ ನಡತೆಯು ಅದಕ್ಕೆ ಅನಿ ವಾರ್ಯವಾಗಿರುತ್ತದೆ. 'ಅದು ಹಾಗೇಕೆ' 'ಇದು ಹೀಗೇಕೆ' 'ಅದಕ್ಕೆ ಕ್ರೂರಸ್ವಭಾವವೇಕೆ' 'ಇದಕ್ಕೆ ಸಾಧುಸ್ವಭಾವವೇಕೆ' 'ಆತ ಅಂಥವನೇಕೆ' 'ಈತ ಇಂಥವನೇಕೆ'? ಮುಂತಾದ ವಿಷಮ ಪ್ರಶ್ನೆಗಳ ಜಾಲದಲ್ಲಿ ಬಿದ್ದು ದಿಕ್ಕುಗೆಡುವದಕ್ಕಿಂತ, ಅದರದರ ಮನೋ ಧರ್ಮದ ತಾರತಮ್ಯದಂತೆ ಆಯಾ ಜೀವಿಗೆ ಆಯಾ ವರ್ತನವು ಅನಿ ವಾರ್ಯವೇ ಆಗಿರುವದರಿಂದ ನಾವು ಅದಕ್ಕೆ ಎದೆಗೆಡದೆ ಇರಬೇಕು. ಈ ಧೀರತನ, ಆ ನಿರ್ವ್ಯಾಕುಲತೆ ಇವೆರಡನ್ನೂ ಜೀವನದ ತಳಹದಿ ಯಾಗಿ ಮಾಡಿಕೊಂಡು, ಸತ್ಯಾನ್ವೇಷಿಯು ಹೀಗೆ 'ಅನಿರ್ವಿಣ್ಣ ಚೇತಸ' ನಾಗಿ ಯೋಗಗ್ರಹಣ ಮಾಡಬೇಕು. ಯೋಗಪಥವೇ ರಾಜ ಪಥವು. ಭಕ್ತಿಮಾರ್ಗವು ಕ್ರೂರಮೃಗಗಳಿಂದ ತುಂಬಿದ ಕಾಡು ದಾರಿಯಾಗಿದೆ...ಇತ್ಯಾದಿ ಇತ್ಯಾದಿ. ಅಲ್ಲದೆ ವಿಷಯಕ್ಕೆ ತಕ್ಕಂತೆ ಅಲ್ಲಲ್ಲಿ ಹಿಂದಿನ ಭಗವದ್ಭಕ್ತರ ಭಕ್ತಿಯ ಗೋಳಾಟದ ಕಥೆಗಳನ್ನು ಉದಾಹ ರಿಸಬೇಕೆಂದೂ ಗೊತ್ತುಮಾಡಿಕೊಂಡು, ಆ ಪುಸ್ತಕವನ್ನು ಬರೆಯು ಲಿಕ್ಕೆ ಆರಂಭಿಸಿದನು. ಅದರ ಜೊತೆಗೇ ಮತ್ತೊಂದು ಹಸ್ತಪತ್ರಿಕೆ ಯನ್ನು ಹೊರಡಿಸುವ ವಿಚಾರವೂ ಬಂತು. ಅದರಲ್ಲಿ ದೇವರ ನಿಷ್ಕರು ಣತ್ವವನ್ನು ವ್ಯಕ್ತಪಡಿಸುವ ನೂರು ಪ್ರಶ್ನೆಗಳಿರಬೇಕು, ಅದನ್ನು ಜಗ ತ್ತಿನ ಮುಖ್ಯಭಾಷೆಗಳಲ್ಲೆಲ್ಲ ಪ್ರಸಿದ್ಧಿಸಬೇಕು. ಜಗತ್ತಿನೊಳಗಿನ

ಮೇಧಾವಿಗಳು ತಮ್ಮ ಪ್ರಾಮಾಣಿಕ ಅನುಭವಗಳಿಂದ ಅದಕ್ಕೆ ಉತ್ತರವನ್ನು ಬರೆಯಬೇಕೆಂದು ಪ್ರಧಾನವೃತ್ತಪತ್ರಗಳಲ್ಲಿ ಬಿನ್ನವಿಸಿಕೊಳ್ಳಬೇಕು ಇತ್ಯಾದಿ ಇತ್ಯಾದಿ.

ಆಯಿತು ! ಪ್ರಶ್ನಪತ್ರಿಕೆಯೂ ಬರೆದು ಮುಗಿಯಿತು. ಪುಸ್ತಕವೂ ಕಾಲು ಭಾಗಕ್ಕೆಬಂದಿತು! ಅಷ್ಟರಲ್ಲಿ ಆ ದಾರುಣವಿಚಾರ ತರಂಗಗಳಿಂದ ಮೆದುಳಿಗೆ ತಾಪವಾಗಿ, ಮತ್ತೆ ಮೈಯಲ್ಲಿ ಜ್ವಾಲೆಯಂಥ ಜ್ವರಗಳು ಬಿಟ್ಟವು. ಹಗಲು ಹೋಯಿತು, ಇರುಳು ಬಂತು. ಜ್ವರವೂ ನೂರಾನಾಲ್ಕು ಡಿಗ್ರಿಗೆ ಮಿಕ್ಕಿತು. ಆದರೂ ತಲೆಯೊಳಗೆ ತೆರವಿಲ್ಲ ! ಅದೇ ಪತ್ರಿಕೆಯ ವಿಚಾರ - ಪುಸ್ತಕದ ವಿಚಾರ! ಹಾಗೇ ಮತ್ತೆ ಅಂದುಕೊಳ್ಳುತ್ತಿದ್ದಾನೆ - "ಏನಾಗುವದೋ ಆಗಲಿ, ದೇವಾ ನಿನ್ನ ತಲೆಯ ಮೇಲೆ ಹೆಡಿಗೆ ಹೊರಿಸದೆ ಬಿಡಲಾರೆನು ! ನಿನ್ನ ನಿರ್ದಯತನದ ಕಡೆಗೆ ಲೋಕದ ಲಕ್ಷ್ಯವನ್ನೆಳೆಯದೆ ಹಾಗೇ ಸಾಯಲಾರೆನು !! ನಿನ್ನ 'ನ ಮೇ ಭಕ್ತಃ ಪ್ರಣಶ್ಯತಿ,' ನಿನ್ನ 'ಯೋಗಕ್ಷೇಮಂ ವಹಾಮ್ಯಹಂ' ಎಲ್ಲಾ ತಿಳಿದು ಹೋಗಲಿ!!! ದಯಾಸಾಗರನಲ್ಲ - **ನಿರ್ದಯಸಾಗರನು ನೀನೆಂ**ಬ ಮಾತು ಲೋಕಕ್ಕೆ ಮನವರಿಕೆಯಾಗಲಿ ! "

ಹೀಗೆ ಪ್ರಲಪಿಸುತ್ತಿರುವಂತೆಯೇ ಒಳಗೊಂದು ಸಿಡಿಸಿಡಿವ ವಿಚಾರವೂ ಸ್ಫುರಣಗೊಂಡಿತು. - "ಎಲಾ ! ಲೋಕದ ಚಿಂತೆ ನಿನಗೇನು ? ನಿನ್ನ ಚಿಂತೆ ನಿನಗಿದ್ದರಿರಲಿ. ನೀನು - ಬೇಕಾದರೆ ದೇವರಿದ್ದಾನೆಂದು ಅನ್ನು, ಇಲ್ಲವಾದರೆ ಇಲ್ಲವೆನ್ನು. ನಿನ್ನ ಒಪ್ಪಿಗೆಯಿಂದಾಗಲಿ, ವಿರೋಧದಿಂದಾಗಲಿ ದೇವನ ಅಸ್ತಿತ್ವಕ್ಕೆ ಲಾಭಹಾನಿಗಳುಂಟಾಗುವದು ಅಷ್ಟರಲ್ಲೇ ಇದೆ !!! ಜಗತ್ತನ್ನೆಲ್ಲ ತಿದ್ದಿತೀರಿಸುವ ಚಿಂತೆ ನಿನಗೇನು ??? ನಿನ್ನ ಮಟ್ಟಿಗೆ ನೀನು ಬಲ್ಲಂತೆ ಇದ್ದುಕೋ ! ಇಲ್ಲದ ಉರುಲನ್ನು ಕೊರಳಿಗೆ ಹಾಕಿಕೊಂಡು ಕಣ್ಣುಬಿಡುವದು, ಅಧಿಕ ಪ್ರಸಂಗವಲ್ಲದೆ ಮತ್ತೇನೂ ಅಲ್ಲ ! ಜಗದ ಚಿಂತೆ ಜಗಕ್ಕಿದೆ. ನಿನ್ನ

ಮುಟ್ಟಿಗೆ ನೀನು ನೋಡಿಕೋ !!! " ಎಲ್ಲಿಂದ ಹೊರಟಿತೋ ಏನೋ–ಸುಡುಸುಡುವ ವಿಚಾರತರಂಗವು ಈತನನ್ನು ಬೆಪ್ಪುಗೊಳಿಸಿಬಿಟ್ಟಿತು ! ಕೂಡಲೇ ಜೀವಕ್ಕೆ ಈ ಮಾತು ಸೈಸೈ ಅನಿಸಿತು ! ಆಯಿತು, ವಿಶ್ವ ಚಾಲಕ ಮಹಾಶಕ್ತಿಯು ಇಂದಿನ ಆಶ್ಚರ್ಯಕರವಾದ ಲೀಲೆಗೆ ಬೆರಗಾಗಿ, ಎದ್ದವನೇ ಎದ್ದು, ಬರೆಯುತ್ತಿದ್ದ ಆ ಪುಸ್ತಕದ ಹಾಳೆಗಳನ್ನೂ' ಪ್ರಶ್ನಪತ್ರಿಕೆಯ ಪ್ರತಿಯನ್ನೂ ಒಯ್ದು, ಅಲ್ಲೇ ಬದಿಯಲ್ಲಿದ್ದ ಬಾವಿಯಲ್ಲಿ ಚಲ್ಲಿಬಿಟ್ಟನು ! ಬಳಿಕ ಸಮಾಧಾನವಾಯಿತು. ಜ್ವರವೂ ಇಳಿಯ ಹತ್ತಿತು !

ಅಂದಿನಿಂದ ಮತ್ತೆ ನಮ್ಮ ನಾಯಕನು ಅನಂತ ಆಕಾಶವನ್ನೂ, ವಿಶಾಲಪೃಥಿವಿಯನ್ನೂ ನೋಡಿ ನೋಡಿ, " ಜಗತಃ ಪಿತರೌ ವಂದೇ ಭುವನೇಶ್ವರೀ ವಿಶ್ವೇಶ್ವರೌ " ಎಂದು ಹಾಡಹತ್ತಿದನು. ಈತನ ರೋಗಶಯ್ಯೆಯು 'ಕಾಟು' ದೊಡ್ಡ ಕಿಡಿಕಿಯ ಹೊಂದಿಗಿದ್ದದರಿಂದ ಅವನಿಗೆ ಯಾವಾಗಲೂ ಆಕಾಶವು ಕಣ್ಣಿಗೆ ಕಂಗೊಳಿಸುತ್ತಿತ್ತು. ಅಂತೂ ಹೀಗೆ ಹಾಡುತ್ತ ನೋಡುತ್ತ, ಹೇಗೋ ಮುಂದೆ ಒಂದೂವರೆ ತಿಂಗಳು ಕಳೆಯಿತು. ಇಷ್ಟರಲ್ಲಿ ಮತ್ತೆ ಆ ಸುಪ್ತವ್ಯಾಘ್ರವು ಕೆತ್ತಿಕೊಂಡು ಏಳುವ ಪ್ರಸಂಗವೊಂದು ಬಂದಿತು !!!

ಜ್ಞಾನಭಿಕ್ಷುವಿನ ಗೆಳೆಯನೊಬ್ಬನು ಭೆಟ್ಟಿಗೆಂದು ಹೊಸದಾಗಿ ಬಂದನು. ಅಂದಿನಿರುಳು ಮಾತುಕತೆ ನಡೆದಿರುವಾಗ ಆ ಮಾತು – ಈ ಮಾತು ಆದ ಮೇಲೆ 'ದೇವರ ವಿಷಯದಲ್ಲಿ ನಿಶ್ಚಿತವಾದ ಅಭಿಪ್ರಾಯವೇನು ?' ಎಂಬ ಮೂಲಪ್ರಶ್ನಕ್ಕೆ ಬಂದು ಮುಟ್ಟಿತು. ಹೊರಟಿತಲ್ಲ ! ಮತ್ತೆ ಅದೇ ಸ್ವರ ! " ಇಲ್ಲವೆಂದು ಹೇಳಲು ಆಗುವ ಹಾಗಿಲ್ಲ ದಿದ್ದರೂ ಕರುಣಾಕರನೆಂದು ಹೇಳುವದಕ್ಕೆ ಸಾಧ್ಯವಿಲ್ಲ ! " ಈ ಮಾತಿನ ಮೇಲೆಯೇ ಸಮರಾತ್ರಿಯವರೆಗೆ ವಾದವಿವಾದ ನಡೆಯಿತು.

ಪ್ರಶ್ನ:—“ ಪುರಾತನಭಗವದ್ಭಕ್ತರು ಆತನ ಕರುಣಾಕರತ್ವ ವನ್ನು ಅತಿಶಯವಾಗಿ ಕೊಂಡಾಡಿರುವರಲ್ಲಾ! ಅವರ ಅನುಭವವು ಸುಳ್ಳೇನು ???”

ಉತ್ತರ:—“ ಹಾಗೆ ಕೊಂಡಾಡಿದಂತೆ ಆತನನ್ನು ನಿಷ್ಕರುಣಿ ಯೆಂದು ಶಪಿಸಿದ್ದೂ ಕಡಿಮೆಯಿಲ್ಲ. ‘ಕರುಣಾಕರ ನೀನೆಂಬುವ ದೇಕೋ! ಭರವಸವಿಲ್ಲೆನಗೆ’ ಎಂದು ಪುರಂದರದಾಸರು ಹಾಡಿದ್ದಾ ರಲ್ಲಾ! ಇಂಥ ಉದಾಹರಣೆಗಳು ಪ್ರತಿಯೊಬ್ಬ ಭಗವದ್ಭಕ್ತನ ಉಕ್ತಿ ಗಳಲ್ಲಿ ಸಿಗುವವು.”

ಪ್ರಶ್ನ:—“ನೀನು ಅಕ್ಕರತೆಯಿಂದೋದುತ್ತಿರುವ ಆಧುನಿಕರ ಗ್ರಂಥಗಳೂ, ಎಲ್ಲಾ ಸುಳ್ಳೇ ಆಗಿವೆಯೇನು ?”

ಉತ್ತರ:—“ ಅವರವರ ವಿಚಾರಸರಣಿಯಂತೆ ಹೋದರೆ, ಅವ ರವರ ಸಿದ್ಧಾಂತಗಳಿಗೆ ತಲಪುವದು ನಿಜ. ಆದರೆ, ನಿಜ ಸತ್ಯವು ಏನಿ ದೆಯೋ ಯಾರು ಬಲ್ಲರು.”

ಎಷ್ಟು ಹೊತ್ತು ಚರ್ಚಿಸಿದರೂ ಇದೇ ನಿಷ್ಕರ್ಷೆ. ಈ ವಾಸ ದಲ್ಲಿ ನಮ್ಮ ನಾಯಕನಿಗೆ ‘ಇದ್ದೂರ ಸಮಾರಾಧನೆಯೂ ತಪ್ಪಿತು, ಬೇರೂರ ಭಿಕ್ಷೆಯೂ ತಪ್ಪಿತು’ ಅನ್ನುವಂತಾಯಿತು. ಇಷ್ಟು ದಿನ ಗಳವರೆಗೆ ಭೂಗಗನಗಳನ್ನು ನೋಡಿ ಏನೋ ಒಂದು **‘ಅನಿರ್ದೇಶ್ಯಂ ಅಲಕ್ಷಣಂ’** ಎನ್ನುವಂಥ ‘ಅಸ್ತಿತ್ವ’ವನ್ನು ಅನುಭವಿಸಿ ಆನಂದ ಪಡುತ್ತಿದ್ದನು. ಆದರೆ ಇಂದು ಅದಕ್ಕೂ ಕೂಡ ಧಕ್ಕೆ ಹತ್ತಿತು.

“ **ಏನೋ ಎಂತೋ** ಅನ್ನುವಂಥಾದ್ದೊಂದು ಯಾವದೋ ಏನೋ ಇದ್ದಾದ್ದರೂ ಫಲವೇನು—ಸತ್ತಾದ್ದರೂ ಸೂತಕವೇನು ???!!! ಅತ್ತರೆ ಅದಕ್ಕೆ ಅರಿಕೆಯಿಲ್ಲ—ಸತ್ತರೆ ಅದಕ್ಕೆ ಸುದ್ದಿಯಿಲ್ಲ! ಇಂಥಾ ದ್ದೊಂದನ್ನು **ಇರುವದು - ಇರುವದು** ಎಂದುಕೊಳ್ಳುವದು ಶುದ್ಧ ಭ್ರಾಂತಿ! ಕಲ್ಲು—ಮಣ್ಣು—ಗಾಳಿ—ಧೂಳಿ ಇಂಥವುಗಳೆಲ್ಲಾ ಇದ್ದ್ದೂ

ಇಲ್ಲದಂತೆ ಇನೆಯಲ್ಲಾ! ಹಾಗೇ ಇದೂ ಒಂದು! **ಇಗ್ದಿರಬೇಕು!** ಅಥವಾ **ಇರುವದೆಂದು** ನಾವು ಕಲ್ಪಿಸಿರಬಹುದು! ಜೊಳ್ಳು ಭ್ರಮೆ! ಈ ಕಲ್ಲು ಮಣ್ಣಿನ ನೆಲ–ಆ ಬಟ್ಟಬಯಲಿನ ಮುಗಿಲು! ಇಷ್ಟೇ ಅಲ್ಲ ವೇನು? ಇನ್ನೇನಿದೆ ಕಲ್ಲು!! ಎಲ್ಲಾ ಶುದ್ಧ ಭ್ರಾಂತಿ!!!"

ಹೀಗೆಂದುಕೊಳ್ಳುತ್ತ ಮರ್ಮಾಂತಿಕ ವೇದನೆಯಿಂದ ತಳಮಳಿಸ ಹತ್ತಿದನು. ನೀರೊಳಗಿಂದ ಹೊರಗೆ ತೆಗೆದ ಮಾಸಿನಂತೆ ಕಸವಿಸಿಪಡ ಹತ್ತಿದನು. ಮಾಯುತ್ತ ಬಂದ ಗಾಯದ ಮೇಲೆ ಮತ್ತೆ ಕಲ್ಲು ಬಿದ್ದಂತಾಯಿತು! ಜೀವಕ್ಕೆ ಸಮಾಧಾನವೆಂಬದೇ ಉಳಿಯಲಿಲ್ಲ! "ನಾಸ್ತಿನಾಸ್ತಿ!" "ಆಸ್ತಿಕತೆಯು ಶುದ್ಧ ಹುಚ್ಚು" "ಅಹಾ ಹಾಗಾದರೆ ನನ್ನ ಗತಿಯಿನ್ನೇನು???" ಹೀಗೆಂದು ನಿಟ್ಟುಸಿರುಗರೆ ಯುತ್ತ ಎದ್ದೆದ್ದು ಬೀಳುವನು. ಹಾಗೇ ಆ ದುರಂತ ಪರಿತಾಪದಲ್ಲಿ ಎಂತೋ ನಿದ್ದೆ ಹತ್ತಿತು.

ಬೆಳಗಿನ ಅಯ್ದು ಗಂಟೆಗೆ ಹಾಗೇ ಆ ತಳಮಳದೊಂದಿಗೇ ಎಚ್ಚತ್ತನು! ಎದ್ದಕೂಡಲೇ ದಿನದ ರೂಢಿಯಂತೆ ತಿರುಗಾಡಲಿಕ್ಕೆ ಹೊರ ಟನು. ತಲೆಯೇನೋ ಹಾಗೇ ಕಾಯ್ದೇ ಇದೆ. ಹೃದಯವೂ ಹಾಗೇ ಜೀಯುತ್ತಾ ಇದೆ. 'ಸರ್ವನಾಶ–ಸರ್ವನಾಶ' ಎಂದು ಮನವು ಹಾಗೇ ಅರಿತೋ ಅರಿಯದೆಯೋ ಒಂದೇಸವನೆ ಗಡಿಯಾರದ ಸೇಕಂದಿನ ಮುಳ್ಳಿನಂತೆ ಅಲುಕುತ್ತಲೇ ಇದೆ!

ಹಿಂದು ನೋಡದೆ, ಮುಂದು ನೋಡದೆ ಹಾಗೇ ಮುನ್ನೋಡಿ ನಡೆದಿದ್ದನು. ಆಗ ದಿಶಂಬರ್ ತಿಂಗಳಾದ್ದರಿಂದ ಚಳಿಗಾಲ. ಕಾಯ್ದ ತಲೆಗೆ ಶುದ್ಧವಾದ ತಂಪು ಹವೆ ಬಡಿಯುತ್ತಲಿದ್ದಿತು. ನಸುಕಿನ ವೇಳೆ ಯಾದ್ದರಿಂದ ಅಡವಿಯ ದಾರಿಯು, ಅತ್ಯಂತ ನಿಶ್ಶಬ್ದವಾಗಿತ್ತು. ಆಗ ತಟ್ಟನೇ ತಲೆಯಲ್ಲಿ ಒಂದು ಯುಕ್ತಿವಾದವು ಹೊಳೆಯಿತು.

"ನಾನು **ಇರುವೆನೋ** ಅಥವಾ **ಇಲ್ಲವೋ ???** ನನ್ನ ಜೀವವು ನನ್ನ ಮೈಯೊಳಗೆಲ್ಲಿ ಇದೆ? ಹೇಗೆ ಇದೆ? ಅದನ್ನು ನಾನು ಎಂದು ನೋಡಿರುವೆ? ಇದೆಯೆಂದು ಯಾಕೆ ಹೇಳಬೇಕು? ಮೈಯನ್ನು ಹರಿದಾಗಲಿ, ಮುರಿದಾಗಲಿ, ಹಿಂಡಿ ರಸ ತೆಗೆದಾಗಲಿ ಆ ಜೀವವೆಂಬುದನ್ನು ಹೊರಗೆ ತೆಗೆದು ನೋಡಬಹುದೋ? ಅಥವಾ ಸೂಕ್ಷ್ಮದರ್ಶಕದಂಥ ಯಂತ್ರಸಾಮುಗ್ರಿಯಿಂದಲಾದರೂ ಆದನ್ನು ಕಾಣಬಹುದೋ? ನಮ್ಮ ದೇಹದಲ್ಲಿ ನಮ್ಮ ಜೀವವು ಇದ್ದಂತೆ ಈ ತುದಿಮೊದಲಿಲ್ಲದ ವಿಶ್ವದಲ್ಲಿ ಅದರ ಆತ್ಮಸ್ವರೂಪವಾಗಿ ಪರಮಾತ್ಮನಿರಲಾರನೇಕೆ? ಭೂಮಿಯನ್ನು ಬರೆ ಅಗಿದರೆ ಅಲ್ಲೇನು? ಕಲ್ಲು ಮಣ್ಣು! ಮುಗಿಲೇರಿ ನೋಡಿದರೆ ಅಲ್ಲೇನಿದೆ? ಬರೇ ಅಪರಂಪಾರವಾದ ಪೊಳ್ಳಿನಲ್ಲಿ ಅಸಂಖ್ಯ ನಕ್ಷತ್ರಗಳು! ಜಡದೃಷ್ಟಿಯಿಂದ ಪರಿಶೋಧಿಸಿದರೆ, ಇದಕ್ಕಿಂತ ಹೆಚ್ಚಿಗೇನು ಲಭ್ಯ? ನಮ್ಮೊಳಗಿನ ಜೀವವನ್ನು ನೋಡುವದಕ್ಕೆ ಯೋಗದಂಥ ಒಂದು ಒಳದೃಷ್ಟಿಯಿದೆಯೆಂದುಕೊಂಡರೆ, ಅದೇ ಒಳದೃಷ್ಟಿಗೆ ದೇವನನ್ನು ಕಾಣುವದಕ್ಕೂ ಸಾಧ್ಯವಿರಲಾರದೇಕೆ?

"ನನ್ನನ್ನು ಒಂದು ವ್ಯಕ್ತಿಯೆಂದು ಹೇಳುವದಾದರೆ, ಆತನನ್ನೂ ಒಂದು **ಮಹಾ**ವ್ಯಕ್ತಿಯೆಂದು ಹೇಳಬಹುದು. ನಮ್ಮ ಜೀವವನ್ನು ಒಂದು ವಸ್ತು ಅಥವಾ, ಒಂದು ದ್ರವ್ಯವಿಶೇಷವೆಂದು ಹೇಳಿದರೆ, ಜೈನಧರ್ಮದಲ್ಲಿ ಹೇಳಿದಂತೆ ಆತನನ್ನೂ ಒಂದು ವಸ್ತುವೆಂದು ಅಥವಾ ಜೀವದ್ರವ್ಯವೆಂದೂ ಹೇಳಬಹುದು. ವ್ಯಕ್ತಿಯೆಂದಾಗ **'ಆತನು' 'ಅವಳು'** ಎಂತ ಕರೆಯಬಹುದಾದರೆ, ವಸ್ತುವೆಂದಾಗ **'ಅದು' 'ಬ್ರಹ್ಮವಸ್ತು' 'ಜೀವದ್ರವ್ಯ' 'ಚೈತನ್ಯ'** ಎಂದು ಯಾವ ಹೆಸರಿನಿಂದಾದರೂ ಕರೆಯಬಹುದು. ಯಾವ ಶಬ್ದದಿಂದ ಕರೆದರೂ ಮೂಲವೆಂಬುದು **ಅದೊಂದೇ**ಯಲ್ಲವೇ? ಬರೆ ವ್ಯಾಖ್ಯೆಯಲ್ಲೇ ಭೇದ. ನಮ್ಮ ಜೀವನವನ್ನು ನಾವು ಸಜ್ಞತೆಯ ಲಕ್ಷಣವೆಂದು ಎಣಿಸಿದರೆ,

ಆತನ ವಿಶ್ವಚಲನವನ್ನೂ, ಸಜ್ಞತೆಯ ಲಕ್ಷಣವೆಂದು ಗ್ರಹಿಸೋಣ. ನಮ್ಮ ಆತ್ಮದಲ್ಲಿ ಅದ್ಭುತ ಮಂತ್ರಶಕ್ತಿಯಿದೆಯೆಂದುಕೊಂಡರೆ, ವಿಶ್ವದ ಆತ್ಮನಾದ **ಆತ**ನಲ್ಲಿ ಆ ಶಕ್ತಿಯು ಅಪರಂಪಾರ ಸಿಧಿಯೇ ಇದೆಯೆನ್ನಬೇಕು. ಒಟ್ಟಿಗೆ ನಮ್ಮನ್ನು ನಾವು ಇರುವದಾಗಿ ಭಾವಿಸಿದರೆ, **ಆತ**ನನ್ನೂ ಇದ್ದಾನೆಂದು ಹೇಳಬೇಕು. ಆದರೆ ಆತನನ್ನು ಇಲ್ಲವೆಂದು ಹೇಳುವದಾದರೆ, ನಮ್ಮನ್ನೂ ನಾವು ಇಲ್ಲವೆಂದು ಗ್ರಹಿಸುವದಕ್ಕೆ ಸಾಧ್ಯವಿರಬೇಕು.''

ಹೀಗೆ ಹೊಳೆಯುತ್ತಲೇ ನಮ್ಮ ನಾಯಕನ ಆ ದಾರುಣ ವ್ಯಥೆಯು ದೂರವಾಗಿ ಹೋಯಿತು. ಋಷಿತುಲ್ಯರಾದ ರೋಮೆನ್ ರೋಲ್ಯಾಂಡ್‌ರೂ ಕೂಡ–'**ನಾನು ಇದ್ದೇನೆ**' ಎಂಬ ಒಂದೇ ಕಾರಣದಿಂದ '**ಆತನು ಇದ್ದಾನೆ**' ಎಂದು ಊಹಿಸಿದೆ ಎನ್ನುತ್ತಾರೆ!



# ೧೪. ಪ್ರಗಾಢಸ್ಪರ್ಶ.

ಇರುಳಲ್ಲಿ ಉಂಟಾಗಿದ್ದ ಮರ್ಮಾಂತಿಕವೇದನೆಯು ಇಂದು ಬೆಳಗಿಗೆ ಹೇಗೆ ಬಯಲಾಯಿತೆಂದು ಹೇಳಿದೆನಷ್ಟೇ ? ಆದರೆ ಅದರಿಂದ ಆತನಲ್ಲಿ ನಿರತಿಶಯ ಆನಂದವಾಗಲಿ, ಪ್ರಬಲ ಭಾವೋದ್ರೇಕವಾಗಲಿ ಉಂಟಾಗಲಿಲ್ಲವಾದರೂ, ತಪ್ತಮಸ್ತಕವು ಶೀತಲವಾಗಿ ಬುದ್ಧಿಗೊಂದು ಅಕಾಟ್ಯ ಯುಕ್ತಿಯು ಹೊಳೆದದ್ದರಿಂದ ಸದ್ಯದ ಮಟ್ಟಿಗಾದರೂ ಬಂದ ಕಂಟಕವು ಬಯಲಾಯಿತೆಂದು ಆತನು ಸಂತಸ ಪಡದೆ ಇಲ್ಲ.

ಈ ದಿನದ ಹಗಲು ಓದುವುದರಲ್ಲಿ ಕಳೆಯಿತು. 'ಫ್ಲಿಂಟ್'ರು ಬರೆದ 'ಥೀಯಿಜಂ' ಅಥವಾ 'ಆಸ್ತಿಕ್ಯವಾದ'—ಮತ್ತು 'ವಾಲೇಸ್'ರ 'ಲ್ಯಾಫ್‌ವರ್ಲ್ಡ್' ಅಥವಾ ಜೀವನ ಜಗತ್ತು ಇವೆರಡು ಗ್ರಂಥಗಳೊಳಗಿನ ಮಹತ್ತ್ವದ ಭಾಗಗಳನ್ನು ಆರಿಸಿ ಸಂಗ್ರಹಿಸಿದ ಒಂದು ಪುಸ್ತಕವು ಒಂದೆರಡು ದಿನಗಳ ಹಿಂದೆಯೇ ಹೊಸದಾಗಿ ಬಂದಿತ್ತು. ಅದನ್ನು ಇನ್ನೂ ಓದಿ ಮುಗಿಸಿರಲಿಲ್ಲವಾದ್ದರಿಂದ ಇಂದು ಓದುತ್ತಿದ್ದಾನೆ. ಆದರಲ್ಲಿ ಜೀವನದ ದುಃಖವನ್ನು ಕುರಿತು ಬರೆದ ಎಷ್ಟೋ ಮಹತ್ತ್ವದ ವಿಚಾರಗಳು, ನಮ್ಮ ನಾಯಕನನ್ನು ಒಂದು ಹೊಸ ರಾಜ್ಯಕ್ಕೇ ತಂದುಬಿಟ್ಟವು.

"ದುಃಖವಿಲ್ಲದಿದ್ದರೆ ಮಾನವನ ಆತ್ಮೋನ್ನತಿಯೇ ಆಗುತ್ತಿರಲಿಲ್ಲ. ಯಾವಾಗಲೂ ಸ್ವೇಚ್ಛಾಚಾರಿಯಾಗಬೇಕೆಂದು ಬಯಸುತ್ತಿರುವದು, ಪ್ರಾಣಿಮಾತ್ರಗಳ ಹುಟ್ಟುಗುಣವಾಗಿರುವದರಿಂದ ಆ ದುರ್ದಮನೀಯವಾದ ದೋಷವನ್ನು ತಡೆಯಲಿಕ್ಕೆ ದುಃಖದ ಯೋಜನೆಯಿದೆ. ಅಲ್ಲದೆ ನಿಂತಲ್ಲಿಯೇ ಬೇರು ಬಿಟ್ಟುಕೊಂಡು ಮೈಗಳ್ಳತನದಿಂದ ಇದ್ದ ಸ್ಥಿತಿಯಲ್ಲೇ ಇರಬಯಸಿ, ಆಯಾಸವಿಲ್ಲದ ಸುಖವು ಎಷ್ಟು

ಸಿಕ್ಕರೆ ಅಷ್ಟಕ್ಕೇ ಸ್ವರ್ಗವೆಂದು ಭಾವಿಸಿಕೊಂಡೋ, ಅಥವಾ ಮೈಮುರಿಯದೆ ಅನ್ಯರ ಲಾಭವನ್ನು ಅರಿಯದಂತೆ ಅಪಹರಸಿಕೊಂಡೋ ಬಾಳುವ ತಮೋಮಯ ಜೀವಗಳನ್ನು ಬಡಿದೆಬ್ಬಿಸಿ ಮುಂದರಿಯ ಹಚ್ಚುವದಕ್ಕೆ ದುಃಖವು ವೀಳ್ಯವನ್ನೆತ್ತಿದೆ. ನೆಲ ಹಿಡಿಯುವೆನೆಂದರೆ ಬಡಿದೆಬ್ಬಿಸುವದು. ಬಲ್ಲಂತೆ ಓಡುವೆನೆಂದರೆ ಅಡ್ಡಗಟ್ಟಿ ತರಬುವದು. ಒಟ್ಟಿಗೆ ಜೀವನಕ್ಕೆ ತೇಜವನ್ನೂ, ಧೀರಗತಿಯನ್ನೂ ತಂದುಕೊಡು. ವದು ದುಃಖದ ಉದ್ದೇಶವಾಗಿದೆ. ದುಃಖದ ಹೊಡೆತದಿಂದ ಜೀವವು ಜರ್ಜರಿತವಾದಂತೆ ಕಾಣುವದೇನೋ ನಿಜ, ಆದರೂ ಅದು, ಮುಂದಿನ ಬಲದ ಬೀಜವಾಗಿದೆ. ಪ್ರಾಣಿಗಳಲ್ಲೆಲ್ಲ ಮನುಷ್ಯನ ಉನ್ನತಿಯೇ ಅತಿಶಯವಾಗಿರುವದಕ್ಕೆ ಕಾರಣವೇನೆಂದು ಈಗ ಸುಲಭವಾಗಿ ಊಹಿಸ ಬಹುದಲ್ಲವೇ ? ಸರ್ವಜೀವರಾಶಿಗಳಲ್ಲಿ ಮನುಷ್ಯನು ಹೆಚ್ಚಿಗೆ ದುಃಖ ವನ್ನು ಹಚ್ಚಿಕೊಳ್ಳುತ್ತಾನೆ ಬೇರೆ ಪ್ರಾಣಿಗಳಿಗೆ ಗತಿಸಿಹೋದ ಸಂಗತಿ ಗಳ ವಿಷಯದಲ್ಲಾಗಲೀ, ಇನ್ನೂ ಬಾರದೆ ಇರುವ ಸಂಗತಿಗಳ ವಿಷಯ ದಲ್ಲಾಗಲಿ ದುಃಖವುಂಟಾಗುವದಿಲ್ಲ. ಕೇವಲ ವರ್ತಮಾನ ಕಾಲದ ಕಷ್ಟಗಳಿಗೆ ಮಾತ್ರ ಆಗಿನಮಟ್ಟಿಗೆ ದುಃಖಿಸುತ್ತೇವೆ. ಆದರೆ ಮನುಷ್ಯ ನಾದರೋ ಹಿಂದುಮುಂದಿನದನ್ನೆಲ್ಲ ನೆನಿಸಿ–ನೆನಿಸಿ ಅಳುತ್ತಾನೆ. ಬಂದಿರಲಿ ಬಾರದಿರಲಿ–ಎಲ್ಲಿ ಏನು ಬರುವದೋ ಎಂದು ಕಷ್ಟಕ್ಕೆ ಹೆದರಿ ಕಳವಳಿಸುತ್ತಾನೆ. ಆಗಿರಲಿ ಹೋಗಿರಲಿ–ಹೀಗಾಯಿತಲ್ಲಾ ಎಂದು ನೊಂದು ಬೆಂದು ಕನವರಿಸುತ್ತಾನೆ. ಸದ್ಯಕ್ಕೆ ಮೈಮೇಲೆ ಬಂದ ಕಷ್ಟನಷ್ಟಗಳಿಗಂತೂ ಆತನು ಕಂಗೆಡುವದಕ್ಕೆ ಸೀಮೆಯೇ ಇಲ್ಲ. ಮಾನವನ ದುಃಖದ ಮೇರೆಯು ಇಷ್ಟೊಂದು ಅಪಾರವಾಗಿದೆ ಯೆಂತಲೇ ಆತನ ಉನ್ನತಿಯೂ ಅತಿಶಯವಾಗಿ ಇದೆ. ಜೀವಿಗಳ ಆತ್ಮೋನ್ನತಿಗಾಗಿಯೇ ಸೃಷ್ಟಿಯು ದುಃಖವೆಂಬ ಪರಮೋಪಾಯ ವನ್ನು ಯೋಜಿಸಿದೆ.''

ನಮ್ಮ ನಾಯಕನಿಗೆ ಬಲವಾಗಿ ಕಾಡುತ್ತಿದ್ದುದು ದುಃಖದ ಅಸ್ತಿತ್ವ. ಅದರ ಉಗ್ರತೆಗೆ ಭ್ರಮಿಸಿ ದೇವನಲ್ಲಿ ಕಾರುಣ್ಯಪ್ರಾರ್ಥನೆ. ಈಗ ದುಃಖಕ್ಕೇ ಒಂದು ಬಗೆಯ ಅರ್ಥವು ಹೊಳೆಯಿತಾದ್ದರಿಂದ ದೇವನ ಕರುಣಾಕರತ್ವದ ಪ್ರಶ್ನವು ಇದ್ದಕ್ಕಿದ್ದಂತೆ ಅಲ್ಲಿಯದಲ್ಲೇ ಎಲ್ಲಿಯೋ ಮರೆಯಾಗಿ ಹೋಯಿತು. ಆಗ ಜ್ಞಾನಭಿಕ್ಷುವಿಗೆ ತನ್ನ ಭವಿತವ್ಯತೆಯ ವಿಷಯದಲ್ಲಿ ಏನೋ ತುಸು ಆಶೆ ಹುಟ್ಟಿದಂತಾಗಿ, ಅರವಿಂದರ "ಪಾಂಡಿಚೇರಿಯ ಅರವಿಂದಾಶ್ರಮದಲ್ಲಿ" ಎಂಬ ಪುಸ್ತಕ ವನ್ನು ತೆಗೆದು ಓದಹತ್ತಿದನು. ಸಾಧಕ ಜೀವನದ ಬಗೆಬಗೆಯ ತೊಡಕುಗಳನ್ನು ಕುರಿತು, ಕೇಳಿದ ಪ್ರಶ್ನೆಗಳಿಗೆ ಅವರು ತಮ್ಮ ಸ್ವಾನು ಭವಪೂರ್ಣವಾದ ವಾಣಿಯಿಂದ ಹೇಳಿದ ಉತ್ತರಗಳು ಅದರಲ್ಲಿವೆ. ನಮ್ಮ ನಾಯಕನು ಈ ಮೊದಲು ಆ ಪುಸ್ತಕವನ್ನು ಎಂದೂ ಓದಿರ ಲಿಲ್ಲವೆಂತಲ್ಲ. ಆದರೆ ಇಂದಿನ ದೃಷ್ಟಿ ಆಗ ಇದ್ದಿದ್ದಿಲ್ಲ. - ಇಷ್ಟೇ. "ಸಾಧಕನ ಜೀವನದಲ್ಲಿ ಒಳಗಿನ ಹೊರಗಿನ ಕಷ್ಟನಷ್ಟಗಳು ಎಷ್ಟೆಷ್ಟು ಹೆಚ್ಚಿದರೆ ಅಷ್ಟಷ್ಟು ಅವನ ಪ್ರಾಕೃತಿಕ ದೋಷಗಳು ಲಯವಾಗು ತ್ತಿವೆಯೆಂದು ತಿಳಿಯಬೇಕು. ಅವಿತುಕೊಂಡು ಅರಿಯದಂತೆ ಒಳ ಸೇರಿ ಕುಳಿತಿರುವ ಆತ್ಮವಿರೋಧಿಯಾದ ದೇಹಭಾವವನ್ನು ನಿರಸನ ಗೊಳಿಸುವದಕ್ಕಾಗಿಯೇ ಅಂಥ ಪ್ರಚಂಡ ಪ್ರತಿಕ್ರಿಯೆಗಳು, ಆವಿರ್ಭ ವಿಸುವವು. ಪೂರ್ಣಯೋಗದ ಸಾಧಕನಲ್ಲಿ ಈಗಿರುವ ಬುದ್ಧಿ, ಚಿತ್ತ, ಪ್ರಾಣ, ಮನಗಳೆಲ್ಲಾ ಪಲ್ಲಟಿಸಿ ಹೋಗಬೇಕಾಗಿರುತ್ತದೆ. ಇಷ್ಟೆ ಅಲ್ಲ- ಸ್ಥೂಲ ದೇಹದಲ್ಲಿರುವ ಮೆದುಳಿನ ಪರೆಗಳು ಮೊದಲು ಮಾಡಿ, ಪಚ ನಾವಯವಗಳ ಸೂಕ್ಷ್ಮ ನಾಡಿಗಳವರೆಗೆ ಎಲ್ಲವೂ ಸಂಪೂರ್ಣ ಬದಲಾ ಗಿರಬೇಕಾಗುತ್ತದೆ. ಇಂಥ ದುರ್ಘಟ ಕಾರ್ಯವೆಲ್ಲ ಕಠೋರ ಸಾಧನೆಗಳಿಲ್ಲದೆ ನಿಸರ್ಗದ ಹಸ್ತದಿಂದಲೇ ಸಾಗಬೇಕಾಗಿರುವಾಗ ಬಹು ವಿಧದ ದೈಹಿಕ, ಮಾನಸಿಕ ತೊಂದರೆಗಳು ಉದ್ಭವಿಸುವದು

ಸಹಜವಾಗಿದೆ. ಒಮ್ಮೊಮ್ಮೆ ಈ ಪ್ರತಿಕ್ರಿಯೆಯು ಎಷ್ಟು ಉಗ್ರ ಸ್ವರೂಪಕ್ಕೆ ಬರಬಹುದೆಂದರೆ, ಆಗ ಸಾಧಕನು ತುಂಬಾ ಪಥಭ್ರಷ್ಟನಾಗಿ ದೇಹಾತ್ಮಬುದ್ಧಿಯ ವರೆಗೆ ಇಳಿದುಬಿಡಬಲ್ಲನು. ಆದರೂ ಅದು, ಅವನ ಶಾಶ್ವತವಾದ ಪತನವಲ್ಲ. ಮಗುವು ನಡೆದಾಡಲಿಕ್ಕೆ ಆರಂಭಿಸಿದಾಗ ಏಳುಬೀಳುವಂಥಾದ್ದು ಇದು. ಹೀಗಿರುವದರಿಂದ ಸಾಧಕನು ತನ್ನ ಸರ್ವಪತನಗಳಲ್ಲಿಯೂ ಪರ್ಯಾಯದಿಂದ ತನ್ನ ಪ್ರಗತಿಯೇ ನಡೆದಿದೆಯೆಂಬ ಸಂಪೂರ್ಣ ಶ್ರದ್ಧೆಯುಳ್ಳವನಾಗಿರಲಿಕ್ಕೆ ಬೇಕು. ಸತ್ಯವಾಗಿಯೂ ಆತನಿಗೆ ಯೋಗಸಿದ್ಧಿ ತಪ್ಪಿದ್ದಲ್ಲ. ಪರಮಾತ್ಮನು ಪೂರ್ಣ ಮಂಗಲಮಯನೆಂಬ ಮಾತು ನೆನಪಿನಲ್ಲಿರಲಿ. ಸಮಗ್ರ ಜಗತ್ತನ್ನಾಳುವ ಮಹಾಶಕ್ತಿಗೆ ಕನಿಷ್ಠಪಕ್ಷಕ್ಕೆ ನಿನ್ನಷ್ಟಾದರೂ ಬುದ್ಧಿಯಿಲ್ಲದೆ ಇಲ್ಲವೆಂಬದನ್ನು ಮರೆಯದಿರು. ಸತ್ಯಸಾಧಕನು ದಿವ್ಯಸತ್ಯವನ್ನು ದೃಢಮುಷ್ಟಿಯಲ್ಲಿ ಹಿಡಿದಿಡಲಿಕ್ಕೆ ಪ್ರಯತ್ನಿಸಬಾರದು. ಯಾಕೆಂದರೆ ಅದು ಹಾಗೆ ಎಂದೂ ಹಿಡಿಕೆಯಲ್ಲಿ ನಿಲ್ಲುವಂತಹದಲ್ಲ. ಹಿಡಿಯಹೊರಟ ಹಾಗೆ, ವಿರಲವಾಗುತ್ತ ಕೊಸರಿಕೊಂಡು ಹೋಗುವದು. ಆದರೆ ನಿನ್ನ ಆತ್ಮದ ಮೇಲಿನ ಪ್ರಕೃತಿಕೋಶಗಳು ಸಂಪೂರ್ಣಶುದ್ಧವಾದಂತೆ ದಿವ್ಯಸತ್ಯವು ಅದರೊಳಗೆ ಬರುತ್ತ ಬರುತ್ತ ಬಂದು ನೆಲೆಗೊಳ್ಳುವದು. 'ಕಾಲೇನಾತ್ಮನಿ ವಿಂದತಿ'!"

ಈ ಮಾತು ಜ್ಞಾನಭಿಕ್ಷುವಿಗೆ ದಿವ್ಯಸಂದೇಶವಾಗಿ ಪರಿಣಮಿಸಿತು. ತನ್ನ ಮುಳುಗಿ ಹೋದ ಗಂಟು, ಅಲ್ಲೇ ಕೈಗೆ ಹತ್ತಿದಂತಾಯಿತು. ತನ್ನ ಉಗ್ರನಿರಾಶೆಯು ಈಗ ಮಹಾ ಮಂಗಳಕರವಾಗಿ ಕಂಡಿತು. ತನ್ನ ಜನ್ಮವು ವ್ಯರ್ಥವಾಗಿರದೆ ಅದರ ಸಾರ್ಥಕತೆಯೇ ಸಮೀಪಿಸಿದೆಯೆಂದೆನಿಸಿತು. ಆಗ ಆತನಿಗಾದ ಅಪಾರವಾದ ಆನಂದವನ್ನು ಬಣ್ಣಿಸಲಶವಲ್ಲ. ಬಾಜಿಗೆ ಬಸುರು ಮೂಡಿದಷ್ಟು ಹಿಗ್ಗಾಯಿತು. 'ಪಂಗುಂ ಲಂಘಯತೇ ಗಿರಿಂ' ಎಂದುಕೊಳ್ಳುತ್ತ ಹಿರಿಹಿರಿಹಿಗ್ಗಿನಲ್ಲಿ ಅಂದಿನಿರುಳನ್ನು ಸುಖನಿದ್ರೆಯಿಂದ ಕಳೆದನು.

ನಿನ್ನಿನ ಬೆಳಗಿಗೆ ನೊಂದುಕೊಳ್ಳುತ್ತ ಎಚ್ಚರಾಗಿದ್ದರೆ, ಇಂದಿನ ಬೆಳಗಿಗೆ ಪರಮಸಂತೋಷದೊಂದಿಗೆ ಎಚ್ಚತ್ತನು. ಎದ್ದವನೇ ತನ್ನ ನಿತ್ಯನೇಮದಂತೆ ತಿರುಗಾಡಲಿಕ್ಕೆ ಹೊರಟನು.

ಸೂರ್ಯೋದಯಕ್ಕೆ ಕಾಲು ತಾಸು ಮಾತ್ರ. ಸಮಸ್ತ ಸೃಷ್ಟಿಯು ಮಂದನೀಲಿಯ ಹಸುರು ಕಾಂತಿಯನ್ನು ತಾಳಿದೆ. ಮುಗಿಲು ಧ್ಯಾನಮೂರ್ತಿಯ ಮುಖಮಂಡಲದಂತೆ ಗಂಭೀರವೂ, ಪ್ರಶಾಂತವೂ, ಪ್ರಫುಲ್ಲವೂ ಆಗಿದೆ!! ಈಗ ಏನಿದೆ? ಎಲ್ಲಾ ನಿಶ್ಯಬ್ದ! ನಿಂತಲ್ಲಿ ನಿಲ್ಲದ ಗಾಳಿ ಕೂಡ ಬೇಗಾಗಿ–ಬೆಪ್ಪಾಗಿ ನಿಂತಿದೆ. ತರುಮರಗಳು ಎಲೆ ಹಳಚದೆ ಮೈಯುಲುಕದೆ ಅಖಂಡ ಆನಂದದ ಗಾಢನೀಲತೆಯಲ್ಲಿ ನಿಮಗ್ನವಾಗಿ ಮಿಸುಕದೆ ನಿಂತುಕೊಂಡಿವೆ. ಅಖಂಡ ಬ್ರಹ್ಮಾಂಡವೀಗ ಧ್ಯಾನಾರೂಢನಾದ ಪ್ರಸನ್ನ ಪರಮಾತ್ಮನಾಗಿ ಕಾಣುತ್ತಿದೆ! ನಿಶ್ಯಬ್ದ–ನಿಶ್ಯಬ್ದ! ನಿಶ್ಯಬ್ದವೆಂದರೂ ಮೃತಮೌನವಲ್ಲ! ಅರ್ಥಪೂರ್ಣ ಮೌನ! ಅನಿರ್ವಚನೀಯವಾದ ಮೌನ! ಸಮಗ್ರವಿಶ್ವವು ಈಗ ಮೌನದಿಂದ ಮಾತನಾಡುತ್ತಿದೆ! ಭೂವಿಭೂಪಾರವೆಲ್ಲಾ ಈಗ ದೇವದೇವನ ದಿವ್ಯದೇಹವಾಗಿ ಕಾಣುತ್ತಿದೆ. ಈ ದಟ್ಟ ನಿಶ್ಯಬ್ದತೆಯೊಡನೆ ನಮ್ಮ ನಾಯಕನ ಆತ್ಮವೊಂದೇ ನೀರವವಾಗಿ ಭಕ್ತಿಗೀತವನ್ನು ಹಾಡುತ್ತಿದೆ!—

"ಧ್ಯಾಯತೀವ ಪೃಥಿವೀ ಧ್ಯಾಯತೀವಾಂತರಿಕ್ಷಂ
ಧ್ಯಾಯತೀವ ದ್ಯೌಃ ಧ್ಯಾಯಂತೀವಾಪೋ
ಧ್ಯಾಯಂತೀವ ಪರ್ವತಾಃ ॥
ನಮಃ ಪುರಸ್ತಾದಥ ಪೃಷ್ಠತಸ್ತೇ
ನಮೋಽಸ್ತು ತೇ ಸರ್ವತ ಏವ ಸರ್ವ ।
ನಮೋ ನಮಸ್ತೇಽಸ್ತು ಸಹಸ್ರಕೃತ್ವಃ
ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥

ದ್ಯಾವಾಪೃಥಿವ್ಯೋರಿದಮಂತರಂ ಹಿ
ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।
ನಾಂತಂ ನ ಮಧ್ಯಂ ನಪುನಸ್ತವಾದಿಂ
ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪಂ ॥ ''

'' ಪೃಥಿವಿಯೂ ಧ್ಯಾನಿಸುತ್ತಿದೆ. ಅಂತರಿಕ್ಷವೂ ಧ್ಯಾನಿಸುತ್ತಿದೆ. ಸ್ಥಲಜಲಗಳೆಲ್ಲಾ ಧ್ಯಾನಿಸುತ್ತಲೇ ಇವೆ. ಗಿರಿದರಿಗಳೂ, ಧ್ಯಾನದಲ್ಲಿಯೇ ಮಗ್ನವಾಗಿವೆ. ಸರ್ವವೂ ಧ್ಯಾನಮಯ. ನಿಶ್ಶಬ್ದ-ನಿಶ್ಶಬ್ದ! ಓ ಧ್ಯಾನಮೂರ್ತಿಯೇ, ಮುಂದೆಯೂ ನಿನಗೆ ನಮಿಸುವೆ. ಹಿಂದೆಯೂ ನಿನಗೆ ನಮಿಸುವೆ! ಮೇಲೆ ನಮಿಸುವೆ, ಕೆಳಗೆ ನಮಿಸುವೆ! ಹೊರಗೆ ನಮಿಸುವೆ—ಒಳಗೆ ನಮಿಸುವೆ! ಎಲ್ಲೆಲ್ಲಿಯೆಂದರೆ ಅಲ್ಲಲ್ಲಿ ನಿನಗೆ ನಮಸ್ಕಾರ! ತಿರುತಿರುಗಿ ನಮಿಸುವೆ—ಹೊರಹೊರಳಿ ನಮಿಸುವೆ! ಮತ್ತೊಮ್ಮೆ ನಮಿಸುವೆ—ಮಗುದೊಮ್ಮೆ ನಮಿಸುವೆ! ಸಾವಿರಸಾರೆ ನಮಿಸುವೆ—ಕೋಟಿಬಾರಿ ನಮಿಸುವೆ! ನಿನ್ನ ಸರ್ವತೋಮುಖೀ ಸ್ವರೂಪಕ್ಕೆ ಸರ್ವದಿಕ್ಕಿನಿಂದ ನಮಸ್ಕಾರವಿರಲಿ! ಏನು ಈ ಪೃಥಿವಿ—ಏನು ಈ ಆಕಾಶ! ಇಂಬಿಲ್ಲ—ಇಂಬಿಲ್ಲ! ಎಲ್ಲ ತುಂಬಿತುಳುಕುವ ಮಹಾಘನ! ಸಕಲದಿಕ್ಕಿನಲ್ಲಿ ಸವನಾಗಿ ಹಬ್ಬಿದೆ—ನಿನ್ನ ಮಹಾಕಾಯ! ಕಾಯವಿಲ್ಲದ ಅಕಾಯ, ಕಾಯಗೊಂಡು ನಿಂತಿಹನಲ್ಲಾ! ಇಲ್ಲದ್ದು ಬಂದಿಲ್ಲಾ-ಇದ್ದದ್ದು ಹೋಗಿಲ್ಲಾ! ತಂದೇ, ಇದ್ದದ್ದೆಲ್ಲಾ ನಿನ್ನ ನಿವಾಸ! ತುದಿಯಿಲ್ಲ ಮೊದಲಿಲ್ಲ! ನಡುವಿಲ್ಲ ಕಡೆಯಿಲ್ಲ! ನಿನ್ನ ಕಾಣದ ಸ್ಥಲವಿಲ್ಲವಲ್ಲಾ!

'' ತಂದೇ, ಅಪ್ಪತ್ತು ದಿನಗಳ ಹಿಂದೆ ನಿನ್ನ ನಿಷ್ಕರುಣದಮೇಲೆ ಪತ್ರಿಕೆಯನ್ನು ಹೊರಡಿಸಬೇಕೆಂದಿದ್ದೆನಲ್ಲಾ! ಅಂದು ಅದನ್ನು ಬಾವಿಯಲ್ಲಿ ಚಲ್ಲಿದ್ದು, ಇಂದಿನ ಈ ದಿವ್ಯಾನಂದದ ಪೂರ್ವಸಂಕೇತವೇನು? ಅಂದಿಗೆ ಇನ್ನೂ ನನ್ನ ಗಳಿಗೆ ಬಂದಿರಲಿಲ್ಲವೇನು? ತಂದೇ, ನಿನ್ನ ಗಳಿ

ಗೆಯೂ ಬಾರದೆ ಲೋಕದಲ್ಲಿ ಏನೂ ನಡೆಯಲಾರದಲ್ಲವೇ? ಮಹಾ ಕಾಲ! ಮಹಾವಿಶ್ವವು ನಿನ್ನ ರೂಪವಾದರೆ, ಮಹಾಕಾಲವು ನಿನ್ನ ಚಿತ್ತವಾಗಿದೆ. ಸ್ಥಲಕಾಲಗಳು ನಿನ್ನ ಅಂಗೋಪಾಂಗಗಳು. ನಿನ್ನ ನಿಶ್ಚಿತಕಾಲದಲ್ಲಿ ಎಲ್ಲಾ ಘಟಿಸಿದರೂ ಮೇಲೆ ನಮ್ಮ ನಿಮಿತ್ತವನ್ನಿಟ್ಟಿ ರುವಿಯಲ್ಲಾ! ಒಳಗೆ ನಿನ್ನ ಸೂತ್ರ, ಮೇಲೆ ನಮ್ಮ ನಿಮಿತ್ತ! ಒಳಗೆ ನಿನ್ನ ಆಟ, ಮೇಲೆ ನಮ್ಮ ಕರ್ಮ! ಒಳಗೆ ನಿನ್ನ ಅನುಗ್ರಹ, ಮೇಲೆ ನಮ್ಮ ಪುರುಷಾರ್ಥ! ಅಸತ್ಯದೊಳಗಿಂದ ಸತ್ಯವನ್ನೂ, ಕಗ್ಗ ತ್ತಲೆಯೊಳಗಿಂದ ಹಿರಿಬೆಳಕನ್ನೂ ಕ್ಷಣಿಕದೊಳಗಿಂದ ಶಾಶ್ವತವನ್ನೂ ಹೊರಗೆಡಹುವುದು ನಿನ್ನ ಲೀಲೆ. ನಿನ್ನ ಅನುಗ್ರಹವು, ನಮ್ಮ ಪುರು ಷಾರ್ಥ! ಕರ್ತಾರನಾಗಿದ್ದು ಅಕರ್ತಾರ!

"ನನ್ನಾಪ್ಯನನ್ನಾಪ್ಯುಭಯಾತ್ಮಿಕಾನೋ
ಭಿನ್ನಾಪ್ಯಭಿನ್ನಾಪ್ಯುಭಯಾತ್ಮಿಕಾನೋ ॥
ಸಾಂಗಾಪ್ಯನಂಗಾಪ್ಯುಭಯಾತ್ಮಿಕಾನೋ
ಮಹಾದ್ಭುತಾನಿರ್ವಚನೀಯರೂಪಾ ॥

"ತಂದೇ, ನಿನ್ನ ಲೀಲೆ ಅದ್ಭುತ ಅಗಾಧವಯ್ಯಾ! "ನಸತ್ ತನ್ನಾಸದುಚ್ಯತೇ?" *

---

* ದಿವ್ಯ ಸತ್ಯದ ಪ್ರಥಮಪ್ರತ್ಯಕ್ಷತೆಯು ಎಲ್ಲ ಸಾಧಕರಿಗೆ ಒಂದೇ ವಿಧವಾಗಿ ಆಗುವದೆಂತಲ್ಲ. ಅವರವರ ಅಂತಶ್ಚಕ್ಷುವಿನ ಜಾತಿ ತಾರತಮ್ಯದಂತೆ ಅವರವರ ದರ್ಶನದಲ್ಲಿ ವಿವಿಧತೆಯು ಕಂಡುಬರುತ್ತದೆ. ಕೆಲವರಿಗೆ ತುದಿಮೊದಲಿಲ್ಲದ **ಮಹಾ ಪ್ರಭೆಯು** ಸರ್ವದಿಕ್ಕಿನಲ್ಲಿ ವ್ಯಾಪಿಸಿಕೊಂಡಿರುವಂತೆ ಕಾಣಿಸುತ್ತದೆ; ಕೆಲವರಿಗೆ **ಇಷ್ಟಮೂರ್ತಿ** ದರ್ಶನವಾಗುತ್ತದೆ; ಕೆಲವರಿಗೆ **ಅಶರೀರವಾಣಿ** ಕೇಳಿಸು ತ್ತದೆ. ಕೆಲವರಿಗೆ ಏನೇನೂ ಇಲ್ಲದ **ಮಹಾಶೂನ್ಯವು** ಗೋಚರಿಸುತ್ತದೆ. ಆದರೆ ಕೆಲವರಿಗೆ ಇದ್ದಕ್ಕಿದ್ದ ಹಾಗೆ ಸಮಸ್ತವಿಶ್ವವು **ಜೀವಂತವಾಗಿರುವಂತೆ** ಅನುಭವಕ್ಕೆ ಬರುತ್ತದೆ. ಕೊನೆಯ ಪ್ರಕಾರದಲ್ಲಿ ಪ್ರಗಾಢವಾದ ಅನಿಸಿಕೆಯಿರುವದೇ

# ಪ್ರತ್ಯಕ್ಷಂ ಬ್ರಹ್ಮ

ಬ್ರಹ್ಮೈವೇದಂ ಅಮೃತಂ, ಪುರಸ್ತಾದ್ ಬ್ರಹ್ಮ, ಪಶ್ಚಾದ್ ಬ್ರಹ್ಮ, ದಕ್ಷಿಣತಶ್ಚೋತ್ತರೇಣ, ಅಧಶ್ಚೋರ್ಧ್ವಂ ಚ ಪ್ರಸೃತಂ **ಬ್ರಹ್ಮೈವೇದಂ ವಿಶ್ವಮಿದಂ** ವರಿಷ್ಠಂ ॥

—ಮುಂಡಕ.

ಯಃ ಪೃಥಿವ್ಯಾಂ ತಿಷ್ಠನ್, ಪೃಥಿವ್ಯಾ ಅಂತರೋ, ಯಂ ಪೃಥಿವೀ ನ ವೇದ, **ಯಸ್ಯಪೃಥಿವೀ ಶರೀರಂ,** ಯಃ ಪೃಥಿವೀಂ ಅಂತರೋ ಯಮಯತಿ, ಏಷ ತ ಆತ್ಮಾ ಅಂತರ್ಯಾಮಿ ಅಮೃತಃ ॥

—ಬೃಹದಾರಣ್ಯಕ.

ಸ್ವಭಾವಮೇಕೇ ಕವಯೋ ವದನ್ತಿ, ಕಾಲಂ ತಥಾನ್ಯೇ ಪರಿಮುಹ್ಯಮಾನಾ, ದೇವಸ್ಯ ಏಷ ಮಹಿಮಾ ತು ಲೋಕೇ **ಯೇನೇದಂ ಭ್ರಾಮ್ಯತೇ ಬ್ರಹ್ಮಚಕ್ರಂ** ॥

—ಶ್ವೇತಾಶ್ವತರ.

ನಮೋ ವಾಯೋ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ, ತ್ವಾಮೇವ **ಪ್ರತ್ಯಕ್ಷಂ ಬ್ರಹ್ಮ** ವದಿಷ್ಯಾಮಿ ॥

—ತೈತ್ತಿರೀಯ.

**ಪ್ರತ್ಯಕ್ಷಾಭಿಃ ಪ್ರಪನ್ನಃ ತನುಭಿಃ** ಅವತು ವಃ ತಾಭಿಃ ಅಷ್ಟಾಭಿಃ ಈಶಃ ॥

—ಕಾಳಿದಾಸ.

I believe that most of what was said of God was in reality said of that Spirit **whose body is Earth.**

—*Candle of Vision.*

